# ಕಣಕುಪ್ಪೆ ಪರಿಸರ : ಚಾರಿತ್ರಿಕ ಅಧ್ಯಯನ

(ಕನ್ನಡ ವಿಶ್ವವಿದ್ಯಾಲಯ, ಹಂಪಿ, ಚರಿತ್ರೆ ವಿಭಾಗಕ್ಕೆ ಎಂ.ಫಿಲ್., ಪದವಿಗಾಗಿ ಸಲ್ಲಿಸಿದ ನಿಬಂಧ)


ಸಂಶೋಧಕರು

ಮಂಜಣ್ಣ ಪಿ.ಬಿ

ಮಾರ್ಗದರ್ಶಕರು

ಡಾ. ವಿರೂಪಾಕ್ಷಿ ಪೂಜಾರಹಳ್ಳಿ

ಸಹ ಪ್ರಾಧ್ಯಾಪಕರು

ಚರಿತ್ರೆ ವಿಭಾಗ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ





ಸಮಾಜ ವಿಜ್ಞಾನಗಳ ನಿಕಾಯ

ಚರಿತ್ರೆ ವಿಭಾಗ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ, ೫೮೩ ೨೭೬

೨೦೦೯-೧೦

# ಕಣಕುಪ್ಪೆ ಪರಿಸರ : ಚಾರಿತ್ರಿಕ ಅಧ್ಯಯನ

(ಕನ್ನಡ ವಿಶ್ವವಿದ್ಯಾಲಯ, ಹಂಪಿ, ಚರಿತ್ರೆ ವಿಭಾಗಕ್ಕೆ ಎಂ.ಫಿಲ್., ಪದವಿಗಾಗಿ ಸಲ್ಲಿಸಿದ ನಿಬಂಧ)

ಸಂಶೋಧಕರು
ಮಂಜಣ್ಣ ಪಿ.ಬಿ

ಮಾರ್ಗದರ್ಶಕರು
ಡಾ. ವಿರೂಪಾಕ್ಷಿ ಪೂಜಾರಹಳ್ಳಿ
ಸಹ ಪ್ರಾಧ್ಯಾಪಕರು
ಚರಿತ್ರೆ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ





ಸಮಾಜ ವಿಜ್ಞಾನಗಳ ನಿಕಾಯ
ಚರಿತ್ರೆ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩ ೨೭೬
೨೦೦೯-೧೦

## ದೃಢೀಕರಣ ಪತ್ರ

ಕಣಕುಪ್ಪೆ ಪರಿಸರ : ಚಾರಿತ್ರಿಕ ಅಧ್ಯಯನ ಎಂಬ ನಿಬಂಧವನ್ನು ಕನ್ನಡ ವಿಶ್ವವಿದ್ಯಾಲಯದ ಎಂ.ಫಿಲ್. ಪದವಿಗಾಗಿ ಮಂಜಣ್ಣ ಪಿ.ಬಿ., ಅವರು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿರುತ್ತಾರೆ. ಪ್ರಸ್ತುತ ನಿಬಂಧವು ಮೂಲವಾಗಿದ್ದು, ಈ ಮೊದಲು ಬೇರೆ ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ದೃಢೀಕರಿಸುತ್ತೇನೆ.

15-9-10

ದಿನಾಂಕ :

ಸ್ಥಳ : ವಿದ್ಯಾರಣ್ಯ

ಡಾ. ವಿರೂಪಾಕ್ಷಿ ಪೂಜಾರಹಳ್ಳಿ
ಸಹ ಪ್ರಾಧ್ಯಾಪಕರು / ಮಾರ್ಗದರ್ಶಕರು
ಚರಿತ್ರೆ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩ ೨೭೬

## ಪ್ರಮಾಣ ಪತ್ರ

ಕಣಕುಪ್ಪೆ ಪರಿಸರ : ಚಾರಿತ್ರಿಕ ಅಧ್ಯಯನ ಎಂಬ ನಿಬಂಧವನ್ನು ಡಾ.ವಿರೂಪಾಕ್ಷಿ ಪೂಜಾರಹಳ್ಳಿ ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿ, ಎಂ.ಫಿಲ್. ಪದವಿಗಾಗಿ ಸಮಾಜ ವಿಜ್ಞಾನಗಳ ನಿಕಾಯದ ಚರಿತ್ರೆ ವಿಭಾಗಕ್ಕೆ ಸಲ್ಲಿಸುತ್ತಿದ್ದೇನೆ. ಪ್ರಸ್ತುತ ನಿಬಂಧವು ಮೂಲವಾಗಿದ್ದು, ಬೇರೆ ಯಾವುದೇ ಉದ್ದೇಶ ಅಥವಾ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ಪ್ರಮಾಣಿಕರಿಸುತ್ತೇನೆ.

ದಿನಾಂಕ : 13/9/2010
ಸ್ಥಳ : ವಿದ್ಯಾರಣ್ಯ

ಮಂಜಣ್ಣ ಪಿ.ಬಿ
ಸಂಶೋಧಕರು
ಚರಿತ್ರೆ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ

# ಪರಿವಿಡಿ



## ಅಧ್ಯಾಯ - ಒಂದು

# ಅಧ್ಯಯನದ ಉದ್ದೇಶ, ವ್ಯಾಪ್ತಿ, ವಿಧಾನ ಹಾಗೂ ಈವರೆಗೆ ನಡೆದಿರುವ ಅಧ್ಯಯನಗಳ ಸಮೀಕ್ಷೆ

### ಪೀಠಿಕೆ

ಗತಕಾಲದ ಐತಿಹಾಸಿಕ ಘಟನೆಗಳನ್ನು ಕಾಲಾನುಕ್ರಮದಲ್ಲಿ ಸತ್ಯಕ್ಕೆ ಚ್ಯುತಿ ಬರದಂತೆ ವೈಜ್ಞಾನಿಕವಾಗಿ ಅಧ್ಯಯನ ಮಾಡಿ ನಿಜಾಂಶವನ್ನು ಜನಕ್ಕೆ ತಿಳಿಸುವುದೇ ಇತಿಹಾಸ. ಈ ರೀತಿಯ ಸತ್ಯಶೋಧನೆ, ಪುರಾತತ್ವ ಅನ್ವೇಷಣೆ ಮತ್ತು ಉತ್ಖನನ, ಪುರಾವೆ, ಶಾಸನ, ಸ್ಮಾರಕ, ಹಸ್ತಪ್ರತಿ, ನಾಣ್ಯ, ಕೋಟೆ ಕೊತ್ತಲ, ಐತಿಹ್ಯ ಮತ್ತು ಸಾಹಿತ್ಯಿಕ ಕೃತಿಗಳನ್ನು ವೈಚಾರಿಕವಾಗಿ ಪ್ರತಿಬಿಂಬಿಸುವುದಾಗಿದೆ. ಕಣಕುಪ್ಪೆಕೋಟೆ ಪರಿಸರದಲ್ಲಿ ಆದಿಮ ಕಾಲ ಹಾಗೂ ಇತಿಹಾಸ ಕಾಲದಿಂದ ರಾಜಕೀಯ ಚರಿತ್ರೆಯಲ್ಲಿಮೌರ್ಯರು, ಶಾತವಾಹನರು, ಬನವಾಸಿ ಕದಂಬರು, ಬಾದಾಮಿ ಚಾಲುಕ್ಯರು, ಸೇವುಣರು, ವಿಜಯನಗರದ ಅರಸರು ಮತ್ತು ಚಿತ್ರದುರ್ಗದ ಪಾಳೆಯಗಾರರು ಆಳ್ವಿಕೆ ನಡೆಸಿದ್ದಾರೆ.

ಕಣಕುಪ್ಪೆ ಪರಿಸರದ ರಾಜಕೀಯ ಚರಿತ್ರೆಯಲ್ಲಿ ಆಳ್ವಿಕೆ ಮಾಡಿದಂತಹ ಅರಸರುಗಳು, ಅನೇಕ ಶಾಸನಗಳನ್ನು, ದೇವಾಲಯಗಳನ್ನು, ಕೋಟೆ-ಕೊತ್ತಲುಗಳು ಭೂದಾನ ಮಾಡಿದಂತಹ ಕುರುಹುಗಳು, ವೀರಗಲ್ಲು, ಮಾಸ್ತಿಗಲ್ಲುಗಳು, ನಾಣ್ಯಗಳು, ಹಸ್ತಪ್ರತಿಗಳು, ಮುಂತಾದ ಐತಿಹಾಸಿಕ ಕುರುಹುಗಳನ್ನು ಬಿಟ್ಟುಹೋಗಿದ್ದಾರೆ. ಈ ಎಲ್ಲಾ ಅಂಶಗಳನ್ನು ನಿಬಂಧದ ಅಡಿಯಲ್ಲಿ ತರುವ ಪ್ರಯತ್ನ ಮಾಡಲಾಗಿದೆ.

ಜಗಳೂರು ತಾಲ್ಲೂಕು ಪುರಾತನ ಕಾಲದಿಂದ ಹಿಡಿದು ಆಧುನಿಕ ಕಾಲದವರೆಗೆ ತನ್ನದೇ ಆದ ಇತಿಹಾಸವನ್ನು ಹೊಂದಿದೆ. ಅಲ್ಲದೇ ಈ ಪ್ರದೇಶದಲ್ಲಿ ಪ್ರತಿ ಹಳ್ಳಿಗಳನ್ನು ಸರ್ವೇಕ್ಷಣೆ ಮಾಡಿರುವುದು ವಿರಳವೆಂದೇ ಹೇಳಬಹುದು. ಹಾಗಾಗಿ ಅದನ್ನು ಗಮನದಲ್ಲಿರಿಸಿಕೊಂಡು ಜಗಳೂರು ತಾಲ್ಲೂಕಿನ ಪ್ರಮುಖ ಐತಿಹಾಸಿಕ ಕೋಟೆ ಹಾಗೂ ಒಂದು ಕಾಲಘಟ್ಟದಲ್ಲಿ ಪ್ರಮುಖ ತಾಲ್ಲೂಕು ಕೇಂದ್ರವಾಗಿದ್ದ

ಕಣಕುಪ್ಪೆಯನ್ನು "ಕಣಕುಪ್ಪೆ ಪರಿಸರ : ಚಾರಿತ್ರಿಕ ಅಧ್ಯಯನ" ಎಂಬ ಶೀರ್ಷಿಕೆಯಡಿ ಅದರ ಪರಿಸರದ ಪ್ರತಿ ಗ್ರಾಮ ಮತ್ತು ಸ್ಮಾರಕಗಳನ್ನು ಕ್ಷೇತ್ರಕಾರ್ಯ ಕೈಗೊಂಡು ಅಲ್ಲಿ ದೊರೆತಿರುವ ಪ್ರಾಥಮಿಕ ಆಕರಗಳು ಹಾಗೂ ಅನುಷಂಗಿಕ ಆಕರಗಳನ್ನು ಅಧ್ಯಯನ ಮಾಡಲಾಗುತ್ತದೆ.

## ಅಧ್ಯಯನದ ಉದ್ದೇಶ

ಐತಿಹಾಸಿಕ ವಿಚಾರಗಳ ಬಗ್ಗೆ ಶೋಧನೆ ನಡೆದು ಇತ್ತೀಚಿನ ದಿನಗಳಲ್ಲಿ ಹೊಸ ಹೊಸ ಪ್ರಕಾರಗಳಲ್ಲಿ ಚರಿತ್ರೆ ನಿರ್ಮಾಣಗೊಂಡಿದೆ. ಇಂದಿಗೂ ಸಹ ಚರಿತ್ರೆಯನ್ನು ವೈಚಾರಿಕವಾಗಿ, ವೈಜ್ಞಾನಿಕವಾಗಿ ಅಧ್ಯಯನ ಮಾಡಲಾಗುತ್ತದೆ. ಆದುದರಿಂದ ಜಗಳೂರು ಪ್ರದೇಶದ ಐತಿಹಾಸಿಕ ಕೋಟೆ, ಕಣಕುಪ್ಪೆ ಕೋಟೆಯ ಇತಿಹಾಸ ಹಾಗೂ ಅದರ ಸುತ್ತಮುತ್ತಲಿನ ಇತಿಹಾಸವನ್ನು ಹೊರತೆಗೆದು ಇತಿಹಾಸಕ್ಕೆ ಸೇರಿಸುವುದು ಇದರ ನಿಜವಾದ ಉದ್ದೇಶವಾಗಿದೆ.

ಯಾವುದೇ ಒಂದು ಪ್ರದೇಶದ ಇತಿಹಾಸವನ್ನು ರಚಿಸಬೇಕಾದರೆ ಆಕರ ಸಾಮಗ್ರಿಗಳನ್ನು ಹುಡುಕುವುದು, ಪರಾಮರ್ಶನ ಮಾಡುವುದು, ಅಧ್ಯಯನ ಕೈಗೊಳ್ಳುವುದು ಸಾಮಾನ್ಯವಾಗಿದೆ. ಹೀಗಾಗಿ ರಾಷ್ಟ್ರೀಯ, ರಾಜ್ಯ ಪ್ರಾಂತ್ಯ ಮಟ್ಟದ ಸಂಶೋಧನೆಗಳು ನಡೆಯುತ್ತಾ ಬಂದಿವೆ. ಇಂಥವುಗಳಲ್ಲಿ ಡಾ.ಚಿದಾನಂದಮೂರ್ತಿಯವರ ಕನ್ನಡ ಶಾಸನಗಳಲ್ಲಿ ಸಾಂಸ್ಕೃತಿಕ ಅಧ್ಯಯನ ಎಂಬ ಕೃತಿಯು ಈ ಪ್ರಾಂತ್ಯದ ಇತಿಹಾಸಕ್ಕೆ ಪ್ರಾಥಮಿಕ ಕೊಡುಗೆಯಾಗಿದೆ. ಈ ರೀತಿಯ ಸ್ಥಳೀಯ ಮಟ್ಟದ ಸೂಕ್ಷ್ಮ ರೀತಿಯ ಸಂಶೋಧನೆಗಳಿಂದ ವೈವಿಧ್ಯಮಯವಾದ ಐತಿಹಾಸಿಕ ಸಂಗತಿಗಳು ಹೊರಬರುತ್ತಿರುವುದು ವಿಶೇಷ.

ಈ ಹಿನ್ನೆಲೆಯಲ್ಲಿ ಇಂದಿನ ದಾವಣಗೆರೆ ಜಿಲ್ಲೆಯ ಜಗಳೂರು ತಾಲ್ಲೂಕಿನಲ್ಲಿ ಕಣಕುಪ್ಪೆ ಕೋಟೆ ಹಾಗೂ ಅದರ ಪರಿಸರದ ಸುತ್ತ ದೊರೆಯುವ ಐತಿಹಾಸಿಕ ಕುರುಹುಗಳನ್ನು ನಿರ್ಲಕ್ಷಿಸಲಾಗಿದ್ದು, ಗಮನದಲ್ಲಿಟ್ಟುಕೊಂಡು, ಅದನ್ನು ಪ್ರಸ್ತುತ ಎಂ.ಫಿಲ್. ಪದವಿಗೆ "ಕಣಕುಪ್ಪೆ ಪರಿಸರ : ಚಾರಿತ್ರಿಕ ಅಧ್ಯಯನ" ಎಂಬ ವಿಷಯವನ್ನು ಅಧ್ಯಯನಕ್ಕೆ ಆಯ್ಕೆಮಾಡಿಕೊಳ್ಳಲಾಗಿದೆ.

## ಅಧ್ಯಯನದ ವ್ಯಾಪ್ತಿ

ಜಗಳೂರು ತಾಲ್ಲೂಕಿನ ಇತಿಹಾಸ ಪ್ರಾಗೈತಿಹಾಸ ಕಾಲದಿಂದ ಇತಿಹಾಸ ಕಾಲದವರೆಗೆ ನೊಳಂಬ, ರಾಷ್ಟ್ರಕೂಟ, ಕಲ್ಯಾಣದ ಚಾಲುಕ್ಯರು, ಹೊಯ್ಸಳರು, ಸೇವುಣರು, ವಿಜಯನಗರದ ಅರಸರು, ಚಿತ್ರದುರ್ಗದ ಪಾಳೆಯಗಾರರು ಪ್ರಮುಖವಾಗಿ ಆಳ್ವಿಕೆ ಮಾಡಿದ್ದಾರೆ. ಅಲ್ಲದೇ ಅವರು ತಮ್ಮ ಆಳ್ವಿಕೆಯ ಕಾಲದಲ್ಲಿ ಅನೇಕ ಶಾಸನಗಳು, ಸ್ಮಾರಕಗಳು, ದೇವಾಲಯಗಳು, ಕೋಟೆ ಕೊತ್ತಲಗಳು, ಕಾಲುವೆ, ಕೆರೆ, ಬಾವಿ, ಹಳ್ಳ, ಕೊಳ್ಳ, ಶಿಲ್ಪಗಳನ್ನು ನಿರ್ಮಿಸಿರುವರು. ಈ ಎಲ್ಲಾ ಅಂಶಗಳನ್ನು ಅಧ್ಯಯನ ಮಾಡುವ ದೃಷ್ಟಿಯಿಂದ ಪ್ರಸ್ತುತ ಅಧ್ಯಯನದ ವ್ಯಾಪ್ತಿಯನ್ನು ಇತಿಹಾಸ ಆರಂಭ ಕಾಲದಿಂದ ಹಿಡಿದು ಚಿತ್ರದುರ್ಗದ ಪಾಳೆಯಗಾರರ ಕಾಲದವರೆಗೆ ಎಂದು ನಿಗದಿಮಾಡಿಕೊಳ್ಳಲಾಗಿದೆ. ಈ ಅವಧಿಯಲ್ಲಿ ರಚನೆ ಆದ ದೇವಾಲಯ, ಕೋಟೆ, ಶಾಸನ, ಶಿಲ್ಪ ಹಾಗೂ ಪ್ರಾಚ್ಯವಶೇಷದ ಕುರುಹುಗಳನ್ನು ಪ್ರಸ್ತುತ ಅಧ್ಯಯನಕ್ಕೊಳಪಡಿಸಿಕೊಳ್ಳಲಾಗುತ್ತದೆ.

## ಅಧ್ಯಯನದ ವಿಧಾನ

ಈ ಪ್ರದೇಶದಲ್ಲಿ ಆಳ್ವಿಕೆ ಮಾಡಿರುವ ಅನೇಕ ರಾಜವಂಶದವರು ದಾನ, ದತ್ತಿ, ಮಾನ್ಯ ಮಾಡಿರುವುದು, ದೇವಾಲಯ, ಶಿಲ್ಪ, ಕೋಟೆ ಕೊತ್ತಲುಗಳನ್ನು ಸುಂದರವಾಗಿ ಕಟ್ಟಿರುವುದು ಕಾಣಬಹುದು. ಈ ಸಾಂಸ್ಕೃತಿಕ ಅವಶೇಷಗಳನ್ನು ಒಂದೆಡೆ ತರುವ ನಿಟ್ಟಿನಲ್ಲಿ ಅಧ್ಯಯನವನ್ನು ಪ್ರಕಟಿತ ಕೃತಿಗಳು, ಲೇಖನಗಳು ಹಾಗೂ ಕ್ಷೇತ್ರಕಾರ್ಯವನ್ನು ಆಧರಿಸಿ ರಚಿಸಲಾಗಿದೆ.

ಪ್ರಸ್ತುತ ಪ್ರದೇಶದ ಬಗ್ಗೆ ಈಗಾಗಲೇ ಅಧ್ಯಯನ ಮಾಡಿದ ವಿದ್ವಾಂಸರ ಮತ್ತು ಸಂಶೋಧಕರ ಪ್ರಕಟಿತ ಲೇಖನ, ಕೃತಿಗಳನ್ನು ಸಂಗ್ರಹಿಸಿಕೊಂಡು, ಹೆಚ್ಚಿನ ಅಧ್ಯಯನಕ್ಕಾಗಿ ಕ್ಷೇತ್ರಕಾರ್ಯದ ಮಾಹಿತಿ ಸಂಗ್ರಹಣೆ, ಕ್ಷೇತ್ರಕಾರ್ಯದಲ್ಲಿ ಕೋಟೆಗೆ ಭೇಟಿ ನೀಡಿ ಅದರ ರಚನೆ, ಬೆಳವಣಿಗೆ, ಅಲ್ಲಿ ದೊರೆಯುವ ಅವಶೇಷಗಳು ಹಾಗೂ ಅದರ ಸುತ್ತಮುತ್ತಲಿನ ಪರಸರದಲ್ಲಿ ದೊರೆಯುವ ಎಲ್ಲಾ ಪ್ರಾಗೈತಿಹಾಸಿಕ ನೆಲೆಗಳು, ಶಾಸನಗಳು, ಕೋಟೆಗಳು, ದೇವಾಲಯಗಳು, ಮೂರ್ತಿ ಶಿಲ್ಪಗಳನ್ನು ಸ್ಥಳದಲ್ಲಿಯೇ ಅಧ್ಯಯನ ಮಾಡಿ ಮಾಹಿತಿ ಸಂಗ್ರಹಿಸಲಾಗುವುದು. ಈ ರೀತಿ ಸಂಗ್ರಹಿಸಿದ ಮಾಹಿತಿಯನ್ನು ಈ ಪ್ರಬಂಧದಲ್ಲಿ ಆರು ಅಧ್ಯಯನಗಳನ್ನಾಗಿ ಮಾಡಿಕೊಂಡು ಅಧ್ಯಯನ ಮಾಡಲಾಗಿದೆ.

ಮೊದಲನೇ ಅಧ್ಯಾಯದಲ್ಲಿ, ಅಧ್ಯಯನದ ಉದ್ದೇಶ, ವ್ಯಾಪ್ತಿ, ವಿಧಾನ, ಈವರೆಗೆ ನಡೆದಿರುವ ಅಧ್ಯಯನಗಳನ್ನು ಸಮೀಕ್ಷಿಸಲಾಗಿದೆ.

ಎರಡನೆಯ ಅಧ್ಯಾಯದಲ್ಲಿ, ಮೌರ್ಯರ ಕಾಲದಿಂದ ಚಿತ್ರದುರ್ಗದ ಪಾಳೆಯಗಾರರ ಕಾಲದವರೆಗಿನ ಅರಸು ಮನೆತನಗಳ ರಾಜಕೀಯ ಬೆಳವಣಿಗೆಯನ್ನು ಗಮನಿಸಲಾಗಿದೆ.

ಮೂರನೇ ಅಧ್ಯಾಯದಲ್ಲಿ ಕಣಕುಪ್ಪೆ ಕೋಟೆಯ ರಚನೆ ಹಾಗೂ ಬೆಳವಣಿಗೆ ಅದರ ನಡುವೆ ಬರುವ ಅರಸರುಗಳ ಬಗ್ಗೆ ಅಧ್ಯಯನ ಮಾಡಲಾಗಿದೆ.

ನಾಲ್ಕನೇ ಅಧ್ಯಾಯದಲ್ಲಿ ಕಣಕುಪ್ಪೆ ಕೋಟೆಯಲ್ಲಿ ಹಾಗೂ ಅದರ ಸುತ್ತಮುತ್ತಲಿನ ಪರಿಸರದಲ್ಲಿ ಕಂಡುಬರುವ ದೇವಾಲಯಗಳು ಹಾಗೂ ಸ್ಮಾರಕಗಳು, ಶಿಲ್ಪಗಳ ಬಗ್ಗೆ ಅಧ್ಯಯನ ಮಾಡಲಾಗಿದೆ.

ಐದನೆಯ ಅಧ್ಯಾಯದಲ್ಲಿ ಕಣಕುಪ್ಪೆ ಕೋಟೆ ಪರಿಸರದಲ್ಲಿ ಕಂಡುಬರುವ ಶಾಸನಗಳು ಹಾಗೂ ಅದರ ಪಾಠಗಳನ್ನು ವಿವರಿಸಲಾಗಿದೆ.

ಆರನೇ ಅಧ್ಯಾಯದಲ್ಲಿ ಈ ನಿಬಂಧದಲ್ಲಿ ಕಂಡುಬರುವ ಫಲಿತಗಳನ್ನು ಸಮಾರೋಪದೊಂದಿಗೆ ಹೇಳಲಾಗಿದೆ.

## ಈವರೆಗೆ ನಡೆದಿರುವ ಅಧ್ಯಯನಗಳ ಸಮೀಕ್ಷೆ

ಜಗಳೂರು ತಾಲ್ಲೂಕಿನ ಇತಿಹಾಸವನ್ನು ಕುರಿತು ಅನೇಕ ಸಂಶೋಧಕರು, ವಿದ್ವಾಂಸರು, ಸಾಹಿತಿಗಳು ಹಾಗೂ ಉತ್ಸಾಹಿ ತರುಣರು ವಿವಿಧ ಬಗೆಯಲ್ಲಿ ಅಧ್ಯಯನ ಮಾಡಿ ತಮ್ಮದೇ ಆದ ಕೊಡುಗೆಯನ್ನು ಸಲ್ಲಿಸಿದ್ದಾರೆ.

ಜಗಳೂರು ಪ್ರದೇಶದಲ್ಲಿ ಇತಿಹಾಸ ಪೂರ್ವಕಾಲದ ಕೆಲವು ನಿವೇಶನಗಳು ಕಂಡುಬಂದಿದೆ. ಆಕನೂರು ಗ್ರಾಮದ ಬಳಿ ಆದಿ ಇತಿಹಾಸ ಕಾಲದ ಕುರುಹುಗಳಾದ ಕಪ್ಪು ಮತ್ತು ಕೆಂಪು ಬಣ್ಣದ

ಮಡಿಕೆಗಳು, ಬಿಳಿ ವರ್ಣದ ರೇಖಾಚಿತ್ರಗಳನ್ನೊಳಗೊಂಡ ಮಡಿಕೆಗಳು, ಬೂದಿ ತರಹದ ಮಣ್ಣು ಇರುವುದನ್ನು ಎಸ್.ವೈ.ಸೋಮಶೇಖರ್ ಅವರು ಇತಿಹಾಸದರ್ಶನ ಸಂಪುಟ ೧೨ ರಲ್ಲಿ ಪ್ರಕಟಿಸಿದ್ದಾರೆ. ಸಂಗೇನಹಳ್ಳಿ ಕೆರೆ ಪ್ರದೇಶದಲ್ಲಿ ಬಯಲು ಬಂಡೆ ರೇಖಾಕೃತಿಗಳಿರುವ ಎಡೆಗಳು, ಕಬ್ಬಿಣ ಯುಗ, ಬೃಹತ್ ಶಿಲಾಯುಗ ಸಂಸ್ಕೃತಿಯ ನೆಲೆಗಳು, ಚರಿತ್ರಾರಂಭಿಕ ನಿವೇಶನಗಳನ್ನು ೧೯೯೭ ಚಿತ್ರದುರ್ಗ ಸಂಶೋಧನಾ ತಂಡದವರು ಪತ್ತೆ ಹಚ್ಚಿದ್ದಾರೆ. ಬಿ.ಎಲ್.ರೈಸ್ ಅವರು ಪ್ರಕಟಿಸಿದ ಎಫಿಗ್ರಾಫಿಯಾ ಕರ್ನಾಟಿಕ ಸಂಪುಟ ೧೧ರಲ್ಲಿ ೪೭ ಶಾಸನಗಳನ್ನು ಜಗಳೂರು ತಾಲ್ಲೂಕು ಒಳಗೊಂಡಿದೆ. ೧೯೨೪ರಲ್ಲಿ ಎಂ.ಎ.ಆರ್.ನಲ್ಲಿ ಎಂ.ಹೆಚ್.ಕೃಷ್ಣರವರು ಜಗಳೂರಿನಲ್ಲಿ ಎರಡು ಶಾಸನಗಳನ್ನು ಶೋಧಿಸಿರುತ್ತಾರೆ. ಎಂ.ಶೇಷಾದ್ರಿ ಅವರು ೧೯೪೭-೫೭ರ ಕಾಲಾವಧಿಯಲ್ಲಿ ಎಂ.ಎ.ಆರ್.ನಲ್ಲಿ ಕ್ರಿ.ಶ. ೧೭ನೇ ಮತ್ತು ೧೮ನೇ ಶತಮಾನಕ್ಕೆ ಸೇರಿದ ಶಾಸನಗಳನ್ನು ಪತ್ತೇ ಮಾಡಿರುವರು. ಡಾ.ಬಿ.ರಾಜಶೇಖರಪ್ಪರವರು ಈ ಪ್ರದೇಶದಲ್ಲಿ ೨೧ ಶಾಸನಗಳನ್ನು ಪತ್ತೆ ಹಚ್ಚಿ ಇತಿಹಾಸ ಕಥನ ಕೃತಿಯಲ್ಲಿ೧೩ ಶಾಸನಗಳ ಬಗ್ಗೆ ಮಾಹಿತಿ ನೀಡಿದ್ದಾರೆ. ಉಳಿದವುಗಳು ಅವರ ಕೈ ಬರಹದ ಪುಸ್ತಕದಲ್ಲಿ ಈ ಪ್ರದೇಶದಲ್ಲಿ ಬರುವ ಅಸಗೋಡಿಗೆ ಅಶೋಕ ಪಟ್ಟಣವೆಂದು ಗುರುತಿಸಿದ್ದಾರೆ. ಹಾಗೆಯೇ ಕ್ರಿ.ಶ. ೧೨ನೇ ಶತಮಾನದ ಮರುಳಸಿದ್ದೇಶ್ವರ ಅಸಗೋಡಿಗೆ ಭೇಟಿ ನೀಡಿರುವುದರ ಕುರಿತು ಉಲ್ಲೇಖಿಸಿದ್ದಾರೆ.

ಎಚ್.ತಿಪ್ಪೇಸ್ವಾಮಿ ಅವರು 'ದಾವಣಗೆರೆ ಜಿಲ್ಲೆಯ ದೇವಾಲಯಗಳು' ಎಂಬ ವಿಷಯದ ಬಗ್ಗೆ ಕನ್ನಡ ವಿಶ್ವವಿದ್ಯಾಲಯದ ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ಅಧ್ಯಯನ ವಿಭಾಗಕ್ಕೆ ಸಲ್ಲಿಸಿದ ಪಿಎಚ್.ಡಿ. ಪ್ರಬಂಧದಲ್ಲಿ ಈ ಪ್ರದೇಶದಲ್ಲಿ ಬರುವ ಕೆಲವು ದೇವಾಲಯಗಳ ಬಗ್ಗೆ ತಿಳಿಸಿದ್ದಾರೆ.

ಡಾ.ಬಿ.ಸುರೇಶರವರ ಚಿತ್ರದುರ್ಗ ದಾವಣಗೆರೆ ಜಿಲ್ಲೆಗಳ ದೇವಾಲಯಗಳು ಎಂಬ ಕೃತಿಯಲ್ಲಿ ಈ ಪ್ರದೇಶದ ಕೆಲವು ದೇವಾಲಯಗಳು, ಶಿಲ್ಪಗಳ ಕುರಿತು ಅಧ್ಯಯನ ಮಾಡಿರುವುದು ಹಾಗೂ ಇತಿಹಾಸ ದರ್ಶನ ಸಂಪುಟ-೨೩ರಲ್ಲಿ ಅಣಬೂರಿನ ಶಾಸನ ಕುರಿತಂತೆ ಲೇಖನ ಪ್ರಕಟಿಸಿರುವರು.

ಕಣಕುಪ್ಪೆ ಕೋಟೆಯ ಬಗ್ಗೆ ಮಹತ್ವದ ಸಂಗತಿಗಳನ್ನು ಎಂ.ಎಂ.ಕಲಬುರ್ಗಿ ಅವರ ಕರ್ನಾಟಕದ ಕೈಫಿಯತ್ತುಗಳ ಮೂಲಕ ತಿಳಿಯಬಹುದಾಗಿದೆ.

ಡಾ.ಎಸ್.ತಿಪ್ಪೇಸ್ವಾಮಿ ಅವರು 'ರಕ್ಷಣಾ ವಾಸ್ತುಶಿಲ್ಪ-ಜಗಳೂರು ತಾಲ್ಲೂಕು' ಎಂಬ ಲೇಖನದಲ್ಲಿ ಕಣಕುಪ್ಪೆ ಕೋಟೆಯ ಬಗ್ಗೆ ತಿಳಿಸಿದ್ದಾರೆ.

ಈ ಮೇಲೆ ತಿಳಿಸಿದ ಕಣಕುಪ್ಪೆ ಪರಿಸರದ ಬಗ್ಗೆ ಇಲ್ಲಿಯವರೆಗೆ ಸಂಶೋಧನಾ ಕಾರ್ಯಗಳು ನಡೆದಿಲ್ಲ ಹಾಗೂ ಈ ತಾಲ್ಲೂಕಿನ ಬಗ್ಗೆ ವಿಶ್ಲೇಷಣಾತ್ಮಕ ಸಮಗ್ರ ಮಾಹಿತಿಗಳನ್ನು ಒಂದೆಡೆ ನೀಡಿರುವುದು ಕಾಣುವುದಿಲ್ಲ. ಕಣಕುಪ್ಪೆ ಕೋಟೆಯ ಬಗ್ಗೆ ಯಾವುದೇ ಪ್ರತ್ಯೇಕ ಅಧ್ಯಯನಗಳು ನಡೆದಿಲ್ಲ. ಹೀಗಾಗಿ ಪ್ರಸ್ತುತ ವಿಷಯವನ್ನು ನಿಬಂಧ ರಚನೆಗಾಗಿ ಆಯ್ಕೆ ಮಾಡಿಕೊಂಡಿದ್ದೇನೆ.

ಕಣಕುಪ್ಪೆ ಪರಿಸರದಲ್ಲಿ ಬರುವ ಪ್ರತಿಯೊಂದು ಗ್ರಾಮಗಳನ್ನು ಕ್ಷೇತ್ರಕಾರ್ಯ ಮಾಡಿ ಪ್ರಕಟಿತ ಲೇಖನ, ಐತಿಹ್ಯ, ಶಾಸನ, ದೇವಾಲಯಗಳು, ಶಿಲ್ಪ ಇತ್ಯಾದಿ ಪುರಾವೆಗಳನ್ನು ಪರಾಮರ್ಶಿಸಿ ಇವುಗಳಿಂದ ಈ ಪರಿಸರದ ಮರೆಯಾದ ಚರಿತ್ರೆಯನ್ನು ಪುನಾರಚನೆ ಮಾಡಲು ಪ್ರಯತ್ನ ಮಾಡಲಾಗಿದೆ.

## ಅಧ್ಯಾಯ - ಎರಡು

# ಭೌಗೋಳಿಕ ಮತ್ತು ಚಾರಿತ್ರಿಕ ಹಿನ್ನೆಲೆ

### ಭೌಗೋಳಿಕ

'ಜಗಳೂರು' ಕರ್ನಾಟಕ ರಾಜ್ಯದ ದಾವಣಗೆರೆ ಜಿಲ್ಲೆಯಲ್ಲಿರುವ ಒಂದು ತಾಲ್ಲೂಕು ಕೇಂದ್ರ. ಇದರ ಉತ್ತರಕ್ಕೆ ಬಳ್ಳಾರಿ ಜಿಲ್ಲೆಯ ಕೂಡ್ಲಿಗಿ ತಾಲ್ಲೂಕು, ಪೂರ್ವದಲ್ಲಿ ಚಿತ್ರದುರ್ಗ ಜಿಲ್ಲೆಯ ಚಳ್ಳಕೆರೆ ತಾಲ್ಲೂಕು, ದಕ್ಷಿಣದಲ್ಲಿ ಚಿತ್ರದುರ್ಗ ತಾಲ್ಲೂಕು, ಪಶ್ಚಿಮದಲ್ಲಿ ದಾವಣಗೆರೆ ಜಿಲ್ಲೆಯ ಹರಪನಹಳ್ಳಿ ಮತ್ತು ದಾವಣಗೆರೆ ತಾಲ್ಲೂಕುಗಳು ಇದರ ಮೇರೆಗಳಾಗಿವೆ.

ತಾಲ್ಲೂಕಿನ ವಾಯವ್ಯ ಭಾಗದಲ್ಲಿ ಅನೇಕ ಸಣ್ಣ ಬೆಟ್ಟಗುಡ್ಡಗಳಿವೆ. ಈ ಭಾಗ ಕುರುಚಲು ಮತ್ತು ಪರ್ಣಪಾತಿ ಮರಗಳಿಂದ ಆವೃತವಾಗಿದೆ. ಉಳಿದ ಭಾಗದಲ್ಲಿ ಅಲೆಯಲೆಯಾಗಿ ಏರಿಳಿಯುವ ಎರೆನೆಲವಿದೆ. ಒಟ್ಟಿನಲ್ಲಿ ಇದು ಮೈದಾನ ಪ್ರದೇಶ. ತಾಲ್ಲೂಕಿನ ಕೃಷಿಯೋಗ್ಯ ನೆಲದ ಕಾಲು ಭಾಗದಲ್ಲಿ ಕಪ್ಪು ಅಥವಾ ಕಂದು ಬಣ್ಣದ ಮಣ್ಣಿದೆ. ಉಳಿದ ಭಾಗ ಕೆಂಪು ಅಥವಾ ಮರಳು ನೆಲ, ಇದು ಅಷ್ಟೇನೂ ಫಲವತ್ತಾಗಿಲ್ಲ.

ಚಿತ್ರದುರ್ಗ ತಾಲ್ಲೂಕಿನ ಓಬಳದೇವರ ಗುಡ್ಡದಿಂದ ಹುಟ್ಟಿ ಕಾತ್ರಾಳು ಸಂಗೇನಹಳ್ಳಿ ಕೆರೆ ಮೂಲಕ ದೋಣಿಹಳ್ಳಿಯಿಂದ ಬಳ್ಳಾರಿ ಜಿಲ್ಲೆಯನ್ನು ಪ್ರವೇಶಿಸುತ್ತದೆ. ಭೀಮಸಮುದ್ರ ಕೆರೆಯಿಂದ ಹೊರಡುವ ಜನಗಿಹಳ್ಳ ಈ ತಾಲ್ಲೂಕಿನ ಪೂರ್ವದ ಕೆಲವು ಗ್ರಾಮಗಳ ಮೂಲಕ ಹರಿಯುತ್ತದೆ. ಇದು ವ್ಯವಸಾಯಕ್ಕೆ ಅನುಕೂಲಕರವಾಗಿದೆ. ತಾಲ್ಲೂಕಿನ ಉಳಿದ ಭಾಗಗಳಲ್ಲಿ ನೀರಿನ ಆಸರೆ ಹೆಚ್ಚಾಗಿಲ್ಲ. ಮಳೆ ಕಡಿಮೆ, ೭-೮ ದೊಡ್ಡ ಕೆರೆಗಳು ಹಲವು ಸಣ್ಣ ಕೆರೆಗಳು ಇವೆ. ತಾಲ್ಲೂಕಿನ ನಡುವೆ ನೈಋತ್ಯದಿಂದ ಈಶಾನ್ಯಕ್ಕೆ ಸಾಗಿರುವ ಉಬ್ಬು ನೆಲದ ನೆತ್ತಿರೇಖೆಯಿದೆ. ವಾಯವ್ಯ ಮತ್ತು ಆಗ್ನೇಯಾಭಿಮುಖವಾಗಿ ಹರಿಯುವ ಸಣ್ಣಪುಟ್ಟ ಹಳ್ಳಗಳು ಬಾವಿಗಳಿಗೆ ನೀರು ಪೂರೈಸುತ್ತವೆ. ಆಗ್ನೇಯದ ಹಳ್ಳಗಳು ಜನಗಿಹಳ್ಳಕ್ಕೆ ನೀರಿನ ಆಸರೆಗಳಾಗಿವೆ. ಜನಗೀಹಳ್ಳದ ಸುತ್ತಮುತ್ತ ದಡಗಳ ಮೇಲೆ ತೋಡಿರುವ ಬಾವಿಗಳು ನೀರಾವರಿಗೆ ಸಹಾಯಕ.

ಹತ್ತಿ, ಭತ್ತ, ಕಬ್ಬು, ನವಣೆ, ಜೋಳ, ರಾಗಿ, ತೆಂಗು, ಅಡಕೆ, ಶೇಂಗಾ, ಸೂರ್ಯಕಾಂತಿ, ಈರುಳ್ಳಿ, ಇಲ್ಲಿಯ ಮುಖ್ಯ ಬೆಳೆಗಳು. ಕೆಲವು ಕಡೆ ವರ್ಷದಲ್ಲಿ ಎರಡು ಫಸಲನ್ನು ತೆಗೆಯುತ್ತಾರೆ. ಹಾಗೂ ಈ ಪರಿಸರದಲ್ಲಿ ಕೋಟೆ, ಕೊತ್ತಲ, ಶಾಸನ, ದೇವಾಲಯ, ಶಿಲ್ಪಗಳು, ಈ ರೀತಿಯಾದ ಅನೇಕ ಐತಿಹಾಸಿಕ ಕುರುಹುಗಳಿವೆ. ಕಳಕುಪ್ಪೆ ಎಂದು ಹೆಸರು ಬರಲು ಕಾರಣ ಕೋಟೆಯನ್ನು ಕಟ್ಟಿಸುವಂತಹ ಸಂದರ್ಭದಲ್ಲಿ ಹೊಂಡದಲ್ಲಿ ಒಂದು ಶುಖ ಸಿಗುತ್ತದೆ. ಆಗ ಕೆಲಸಗಾರ ಕೋಮಾರಪ್ಪನ ಬಳಿ ತಂದು ಕೊಡುತ್ತಾನೆ. ಕೋಮಾರಪ್ಪನ್ನ ಚಿತ್ರದುರ್ಗದಿಂದ ತಿಮ್ಮಪ್ಪ ಜೋಯಿಸರನ್ನು ಕರೆಸಿ ಶಂಕವನ್ನು ತೋರಿಸಿದಾಗ ಅವರು ಈ ಶಂಖ ಹಾಗೂ ಅದು ದೊರೆತ ಸ್ಥಳವನ್ನು ನೋಡಿ ಇದು ಹಿಂದೆ ಕಣ್ವ ಋಷಿಗಳ ಆಶ್ರಮ ಆಗಿತ್ತು. ಇದು ಕಣ್ವ ಋಷಿಗಳ ಶಂಖ ಎಂದು ಹೇಳುತ್ತಾರೆ. ಅಂದಿನಿಂದ ಈ ಗುಡ್ಡಕ್ಕೆ ಕಣ್ವಕುಪ್ಪೆ ಎಂದು ಹೆಸರು ಬಂದಿದೆ.[೧]

## ಚಾರಿತ್ರಿಕ ಹಿನ್ನೆಲೆ

ಮನುಷ್ಯ ಬರವಣಿಗೆಯನ್ನು ಕಂಡುಕೊಳ್ಳುವ ಮೊದಲು ಹಾಗೂ ಅವನ ಜೀವನದ ರೀತಿ ನೀತಿಗಳು ಅಷ್ಟೇನೂ ಸುಧಾರಿಸದೇ ಇದ್ದ ಕಾಲಾವಧಿಯನ್ನು ಪ್ರಾಗೈತಿಹಾಸಿಕ ಕಾಲವೆಂದು ಕರೆಯುತ್ತೇವೆ. ಕಣಕುಪ್ಪೆ ಪರಿಸರ ವ್ಯಾಪ್ತಿಯಲ್ಲಿ ಕೆಲವು ಪ್ರಾಗೈತಿಹಾಸಿಕ ನೆಲೆಗಳು ಕಂಡುಬಂದಿದ್ದು, ಅವುಗಳಲ್ಲಿ ಆ ಕಾಲದ ಮನುಷ್ಯ ಉಪಯೋಗಿಸಿ ಬಿಟ್ಟು ಹೋದ ಕೆಲವು ಅವಶೇಷಗಳು ದೊರಕಿವೆ. ಈ ಪರಿಸರದ ವ್ಯಾಪ್ತಿಯಲ್ಲಿ ಹಲವು ರಾಜಮನೆತನಗಳು ಹಾಗೂ ಅವರ ಸಾಮಂತರು ಆಳ್ವಿಕೆ ನಡೆಸಿದ್ದಾರೆ. ಇವರುಗಳು ತಮ್ಮ ಕಾಲಾವಧಿಯಲ್ಲಿ ಅನೇಕ ಪ್ರಜಾಹಿತ ಕಾರ್ಯಗಳನ್ನು ಕೈಗೊಂಡಿರುತ್ತಾರೆ. ಈ ಚಾರಿತ್ರಿಕ ಕಾಲಘಟ್ಟದಲ್ಲಿ ತಮ್ಮದೇ ಆದ ವಿಶಿಷ್ಟ ಸ್ಥಾನಗಳನ್ನು ಇವರು ಗಳಿಸಿಕೊಂಡಿದ್ದಾರೆ. ಈ ಬಗೆಯ ಕೆಲವು ಸಂಗತಿಗಳನ್ನು ಈ ಕೆಳಗಿನ ಶಿರೋನಾಮೆಗಳ ಅಡಿಯಲ್ಲಿ ವಿವರಿಸಲಾಗಿದೆ.

## ಪ್ರಾಗೈತಿಹಾಸಿಕ ಕಾಲ

ಸೃಷ್ಟಿಯಲ್ಲಿ ಮಾನವನಿಗೆ ಒಂದು ವಿಶಿಷ್ಟ ಸ್ಥಾನವಿದೆ. ಮೂಲತಃ ಮಾನವನಿಗೆ ಪ್ರಕೃತಿಯನ್ನು ಅವಲಂಬಿಸಿಕೊಂಡು ಜೀವಿಸಲೇಬೇಕಾದ ಪರಿಸ್ಥಿತಿ ಇಂದಿಗೆ ಸುಮಾರು ನಾಲ್ಕು ಮಿಲಿಯನ್ ವರ್ಷಗಳ ಹಿಂದೆ ಮನುಷ್ಯ ಜೀವಿಸಿದ್ದ ಎನ್ನುವುದಕ್ಕೆ ಸಾಕ್ಷ್ಯಾಧಾರಗಳಿವೆ.[೨] ಅಂದಿನಿಂದಲೂ ಮನುಷ್ಯ ಶಿಲೆಯೊಡನೆ ನಿಕಟ ಸಂಬಂಧ ಹೊಂದಿದ್ದಾನೆ. ಪ್ರಕೃತಿ ಮಾನವನಿಗೆ ಮೊದಲು ನೀಡಿದ ಕೊಡುಗೆಗಳಲ್ಲಿ ಶಿಲೆಯೂ ಒಂದಾಗಿದೆ. ಆರಂಭದಲ್ಲಿ ಅಲೆಮಾರಿಯಾಗಿದ್ದ ಮಾನವನಿಗೆ ಗೆಡ್ಡೆಗೆಣಸುಗಳನ್ನು, ಹಣ್ಣುಗಳನ್ನು, ಅಗೆದು ತೆಗೆಯಲು ಗಿಡಗಳನ್ನು ಕಡಿಯಲು, ಬೇಟೆಯಾಡಲು, ಬೇಟೆಯಾಡಿದ ಪ್ರಾಣಿಗಳ ಮಾಂಸವನ್ನು ತುಂಡು ಮಾಡಲು, ಮೃತ ಪ್ರಾಣಿಗಳ ಚರ್ಮವನ್ನು ಬೇರ್ಪಡಿಸಲು ಕಟ್ಟಿಗೆ ಉಪಕರಣಗಳ ಆಯುಧಗಳನ್ನು ತಯಾರಿಸಲು, ಶಿಲೆ ಮಾನವನಿಗೆ ನೆರವಾಗಿದೆ. ಒಟ್ಟಿನಲ್ಲಿ ಅಂದು ಮಾನವನ ಜೀವನದ ಒಂದು ಭಾಗವಾಗಿ ಶಿಲೆ ಬಳಕೆಯಾಗುತ್ತಿತ್ತು. ಅಂದರೆ ಲೋಹದ ಬಳಕೆ ಆಗುವವರೆಗೆ ಶಿಲೆಗಳನ್ನು ಮಾನವ ಅವಲಂಬಿಸಿದ್ದ. ಈ ಕಾಲಾವಧಿಯನ್ನು ಶಿಲಾಯುಗ (ಸ್ಟೋನೇಜ್) ಎಂದು ಕರೆಯುತ್ತಾರೆ.

ಜಗಳೂರಿನಿಂದ ೧೬ ಕಿ.ಮೀ.ದೂರದಲ್ಲಿರುವ ಸಂಗೇನಹಳ್ಳಿ ಕೆರೆಯ ಸುತ್ತಲೂ ೧೯೯೭ರಲ್ಲಿ ಚಿತ್ರದುರ್ಗ ಸಂಶೋಧನಾ ತಂಡದ ಸದಸ್ಯರು ಅನ್ವೇಷಣೆ ಕೈಗೊಂಡು ಹೊಸ ಅಂಶಗಳನ್ನು ಬೆಳಕಿಗೆ ತಂದಿದ್ದಾರೆ. ಇಲ್ಲಿಯ ಕೆರೆಯಲ್ಲಿನ ದಿಬ್ಬಗಳನ್ನು ಸಾಮಾನ್ಯ ಮಣ್ಣು ಗುಡ್ಡೆಗಳೆಂದು ಜನ ಭಾವಿಸಿದ್ದರು. ಆದರೆ ಅಲ್ಲಿನ ಸ್ತರಗಳಲ್ಲಿ ದೊರೆತ ಬೂದು ಮಣ್ಣು ಹಾಗೂ ಅದೇ ದಿಬ್ಬದಲ್ಲಿ ದೊರೆತ ಎಲುಬಿನ ಅವಶೇಷಗಳನ್ನು ಆಧಾರವಾಗಿಟ್ಟುಕೊಂಡು ಇವುಗಳು ನವ ಶಿಲಾಯುಗ ಕಾಲಕ್ಕೆ ಸೇರಿದ ಬೂದಿ ದಿಬ್ಬಗಳೆಂದು ಹೇಳಿದ್ದಾರೆ.[೬] ಇದೇ ನೆಲೆಯಲ್ಲಿ ಕೈ ಕೊಡಲಿಗಳು ಬೂದು ಕಪ್ಪು ಬಣ್ಣದ ಮಡಕೆ ಚೂರುಗಳು ದೊರೆತಿವೆ. ಜಗಳೂರಿನಿಂದ ೬.೨ಕಿ.ಮೀ ದೂರದಲ್ಲಿರುವ ಕೂಣಚಗಲ್ ರಂಗನಾಥಸ್ವಾಮಿ ಬೆಟ್ಟದಲ್ಲಿ ಸಹ ನವ ಶಿಲಾಯುಗದ ಅವಶೇಷಗಳು ದೊರೆತಿವೆ. ಜಗಳೂರಿನಿಂದ ೮ ಕಿ.ಮೀ. ದೂರದಲ್ಲಿರುವ ಅರಿಶಿನಗುಂಡಿ ಗ್ರಾಮದ ಹಳ್ಳದಲ್ಲಿ ನವ ಶಿಲಾಯುಗದ ಕೊಡಲಿಗಳು ದೊರೆತಿವೆ.

ಈ ತಾಲ್ಲೂಕಿನೊಳಗಡೆ ದೊರೆತ ಮಡಕೆ ಚೂರು, ಆಯುಧೋಪಕರಣಗಳು ಮತ್ತು ಇತರ ಅವಶೇಷಗಳು ಚಿತ್ರದುರ್ಗ ಜಿಲ್ಲೆಯ ಬ್ರಹ್ಮಗಿರಿ, ಜಟ್ಟಂಗಿರಾಮೇಶ್ವರ ಮೊದಲಾದೆಡೆ ದೊರೆತ ಅವಶೇಷಗಳಿಗೆ ಹೆಚ್ಚು ಸಾಮಿಪ್ಯಾಗಿದೆ. ಹಾಗೆಯೇ ಬಳ್ಳಾರಿ, ಶಿವಮೊಗ್ಗ, ಧಾರವಾಡ ಜಿಲ್ಲೆಯ ವಿವಿಧ ನೆಲೆಗಳಲ್ಲಿ ದೊರೆತ ಅವಶೇಷಗಳಿಗೆ ಹೋಲಿಕೆಯಾಗಿವೆ. ಆದುದರಿಂದ ಕಣಕುಪ್ಪೆ ಪರಿಸರ ಪ್ರಾಗೈತಿಹಾಸಿಕ ಸಂಸ್ಕೃತಿಯ ಜನರ ಆವಾಸಸ್ಥಾನವಾಗಿತ್ತು ಎಂಬುದರಲ್ಲಿ ಸಂಶಯವಿಲ್ಲ.

### ಚಾರಿತ್ರಿಕ ಕಾಲ

ಕರ್ನಾಟಕದಲ್ಲಿ ಚಾರಿತ್ರಿಕ ಕಾಲ ಕ್ರಿ.ಪೂ.೪-೩ನೇ ಶತಮಾನಗಳಿಂದ ಆರಂಭವಾಗುತ್ತದೆ. ಜಗಳೂರು ತಾಲ್ಲೂಕು ಪ್ರಾಚೀನ ಕಾಲದಿಂದಲೂ ವಿವಿಧ ರಾಜಮನೆತನಗಳ ಆಳ್ವಿಕೆಗೆ ಒಳಪಟ್ಟಿತೆಂಬುದನ್ನು ಅಲ್ಲಿ ದೊರೆತ ಶಾಸನಗಳು ಉಲ್ಲೇಖಿಸುತ್ತವೆ. ಅಷ್ಟೇ ಅಲ್ಲದೆ ಅಲ್ಲಿನ ಪ್ರದೇಶದ ಸಾಮಂತ ರಾಜ ಮನೆತನಗಳ ಆಳ್ವಿಕೆ ಮಾಡಿದ ಬಗ್ಗೆ ಆಧಾರಗಳು ಪ್ರಾಚೀನ ಕಾಲದಿಂದ ಮಧ್ಯಯುಗದ ಕಾಲದವರೆಗಿನ ರಾಜಕೀಯ ಇತಿಹಾಸವನ್ನು ಕುರಿತಂತೆ ಇಲ್ಲಿ ಅಧ್ಯಯನ ಮಾಡಲಾಗಿದೆ.

### ಮೌರ್ಯರ ಆಳ್ವಿಕೆ

ಕ್ರಿ.ಪೂ.ನಾಲ್ಕನೇ ಶತಮಾನದಲ್ಲಿ ಮೌರ್ಯ ಸಾಮ್ರಾಜ್ಯವು ಸ್ಥಾಪನೆಯಾಗುವ ಮೊದಲೇ ಉತ್ತರದ ಸಾಮ್ರಾಜ್ಯ ಸ್ಥಾಪಕರು ದಕ್ಷಿಣ ಭಾರತದ ಅನೇಕ ಪ್ರದೇಶಗಳನ್ನು ಗೆದ್ದು ತಮ್ಮ ಆಳ್ವಿಕೆಯನ್ನು ವಿಸ್ತರಿಸಿದ್ದರು. ಮೌರ್ಯರಿಗಿಂತ ಮೊದಲು ನಂದರು, ಶಿಶುನಾಗರು, ಕರ್ನಾಟಕದ ಕೆಲವು ಭಾಗಗಳನ್ನು ಆಳಿರುವುದಕ್ಕೆ ಆಧಾರಗಳಿವೆ. ನಂದರನ್ನು ಕೆಳಗುರುಳಿಸಿದ ಮೌರ್ಯರು ಅನುಕ್ರಮವಾಗಿ ದಕ್ಷಿಣ ಭಾರತವನ್ನು ಒಳಗೊಂಡ ಮಗಧ ರಾಜ್ಯದ ಒಡೆಯರಾದರೆಂದು ತಿಳಿದುಬರುತ್ತದೆ. ಕರ್ನಾಟಕದಲ್ಲಿ ಬ್ರಹ್ಮಗಿರಿ, ಅಶೋಕಸಿದ್ಧಾಪುರ, ಜಟ್ಟಿಂಗರಾಮೇಶ್ವರ (ಚಿತ್ರದುರ್ಗ ಜಿಲ್ಲೆ) ಮಸ್ಕಿ, (ರಾಯಚೂರು ಜಿಲ್ಲೆ) ಉದೇಗೊಳಂ, ನಿಟ್ಟೂರು (ಬಳ್ಳಾರಿ ಜಿಲ್ಲೆ) ಹಾಗೂ ಸನ್ನತಿ (ಗುಲ್ಬರ್ಗ ಜಿಲ್ಲೆ)ಯಲ್ಲಿ ಅಶೋಕನ

ಶಾಸನಗಳು ದೊರೆತಿವೆ. ಹಾಗಾಗಿ ಈ ಮೇಲಿನ ಪ್ರದೇಶಗಳು ಮೌರ್ಯ ಸಾಮ್ರಾಜ್ಯದ ಅಧೀನದಲ್ಲಿದ್ದವೆಂದು ಹೇಳಬಹುದು.

ಜಗಳೂರು ಅದರ ಸುತ್ತ ಮುತ್ತಲಿನ ಪ್ರದೇಶಗಳು ಸಹ ಮೌರ್ಯರ ಅಧೀನಕ್ಕೆ ಒಳಗಾಗಿದ್ದವು ಎಂದು ಹೇಳಬಹುದು. ಪಕ್ಕದ ಚಿತ್ರದುರ್ಗ ಜಿಲ್ಲೆಯಲ್ಲಿ ದೊರೆತಿರುವ ಅಶೋಕನ ಶಾಸನಗಳು ಮೌರ್ಯರ ಆಳ್ವಿಕೆಯನ್ನು ಅಧಿಕೃತವಾಗಿ ಸ್ಪಷ್ಟಪಡಿಸುವ ಆಧಾರಗಳಾಗಿವೆ. ಅಶೋಕನ ಶಾಸನಗಳು ೨ ಮತ್ತು ದಕ್ಷಿಣದ ರಾಜ್ಯದ ಹೆಸರುಗಳನ್ನು ತಿಳಿಸುತ್ತವೆ. ಬ್ರಹ್ಮಗಿರಿ, ಅಶೋಕ ಸಿದ್ಧಾಪುರ, ಮತ್ತು ಜಟ್ಟಿಂಗಿ ರಾಮೇಶ್ವರ ಎಂಬಲ್ಲಿಯ ಮೌರ್ಯ ಚಕ್ರವರ್ತಿ ಅಶೋಕನ ಶಾಸನಗಳು ಅವನ ಸಾಮ್ರಾಜ್ಯದ ಗಡಿಗಳನ್ನು ಸೂಚಿಸುವ ಗುರುತುಗಳಾಗಿವೆ.[೪] ಇತ್ತೀಚಿಗೆ ನಡೆದ ಸಂಶೋಧನೆಗಳಿಂದ ಮೌರ್ಯ ಸಾಮ್ರಾಜ್ಯವು ಚಿತ್ರದುರ್ಗ ಜಿಲ್ಲೆಯ ಮೊಳಕಾಲ್ಮೂರು ತಾಲ್ಲೂಕಿನ ಕೆಲವು ಭಾಗಗಳಲ್ಲದೆ. ಈಗಿನ ದಾವಣಗೆರೆ ಜಿಲ್ಲೆಯ ಕೆಲ ಭಾಗಗಳನ್ನು ಒಳಗೊಂಡಿದ್ದುದಾಗಿ ತಿಳಿದುಬಂದಿದೆ.

ಜಗಳೂರು ತಾಲ್ಲೂಕಿನ ಅಸಗೋಡು ಹಿಂದೆ ಅಶೋಕ ಪಟ್ಟಣವೆಂದು ಕರೆಯಲ್ಪಡುತ್ತಿತ್ತು. ಇಲ್ಲಿ ಬೌದ್ಧಧರ್ಮ ಇದ್ದುದರ ಸೂಚನೆಗಳು ಸಿಕ್ಕುತ್ತವೆ.[೫] ದಾವಣಗೆರೆ ಸಮೀಪದ ಶಾಮನೂರು, ಬೇತೂರು, ಅಸಗೋಡುಗಳಲ್ಲಿ ಬೌದ್ಧರಿಗೆ ಸಂಬಂಧಿಸಿದ ಕೆಲ ಅವಶೇಷಗಳು ದೊರೆತಿವೆ.[೬]

ಈ ಜಿಲ್ಲೆಯ ಸಮೀಪದ ಸ್ಥಳಗಳಲ್ಲಿ ಮೌರ್ಯರ ಆಳ್ವಿಕೆಗೆ ಸಂಬಂಧಪಟ್ಟ ಸ್ಪಷ್ಟವಾದ ಆಧಾರಗಳು ದೊರೆತಿರುವುದರಿಂದ ಜಗಳೂರು ಮತ್ತು ಅದರ ಸುತ್ತಮುತ್ತಲಿನ ಪ್ರದೇಶಗಳು ಮೌರ್ಯ ಸಾಮ್ರಾಜ್ಯದ ಭಾಗವಾಗಿದ್ದು ಅವರ ದಕ್ಷ ಆಡಳಿತ ಪದ್ಧತಿಯಿಂದ ಪ್ರಯೋಜನ ಹೊಂದಿದ್ದವೆನ್ನಬಹುದು. ಕಣಕುಪ್ಪೆ ಸುತ್ತಮುತ್ತಲಿನ ಪ್ರದೇಶಗಳಲ್ಲಿ ಮೌರ್ಯರ ಶಾಸನ ಮತ್ತಿತರ ಅವಶೇಷಗಳು ಹೆಚ್ಚು ದೊರೆಯದೇ ಹೋದರೂ ಸಹ ಈ ಸಾಮ್ರಾಟರ ಧಾರ್ಮಿಕ ಸಾಂಸ್ಕೃತಿಕ ಪರಂಪರೆಯು ಮುಂದುವರೆದಿತ್ತು. ಇದಕ್ಕೆ ಸಾಕ್ಷೀಕರಿಸಲು ಚಿತ್ರದುರ್ಗ ಪ್ರದೇಶದಲ್ಲಿ ಹೇರಳವಾಗಿ ಶಾಸನಗಳು, ಅವಶೇಷಗಳು ದೊರೆತಿವೆ. ಹಾಗಾಗಿ ಈ ಪ್ರಾಂತ್ಯವು ಸಹ ಹಲವು ಶತಮಾನಗಳ ಕಾಲ ಮೌರ್ಯರ ಆಳ್ವಿಕೆಗೆ ಒಳಪಟ್ಟಿತ್ತೆಂದು ಹೇಳಬಹುದು.

**ಶಾತವಾಹನರ ಆಳ್ವಿಕೆ**

ಜಗಳೂರು ತಾಲ್ಲೂಕಿನಲ್ಲಿ ಶಾತವಾಹನರ ಆಳ್ವಿಕೆ ಇತ್ತೆ? ಎಂಬುದರ ಬಗ್ಗೆ ಯಾವುದೇ ಶಾಸನಗಳು ದೊರೆತಿಲ್ಲ. ಆದರೆ ಪಕ್ಕದ ಬಳ್ಳಾರಿ ಜಿಲ್ಲೆಯ ಪುಲಮಾಯಿ ಶಾಸನದಿಂದ ಶಾತವಾಹನರ ಕೊನೆಯ ಅರಸರು ತಮ್ಮ ಆಳ್ವಿಕೆಯನ್ನು ಇಲ್ಲಿಯವರೆಗೆ ವಿಸ್ತರಿಸಿದ್ದರೆಂದು ಹೇಳಬಹುದು. ಪುರಾತತ್ತ್ವ ಆಧಾರಗಳಾದ ನಾಣ್ಯ, ಕಟ್ಟಡ, ದೇವಾಲಯ ಮತ್ತು ಅಲಂಕಾರಿಕ ವಸ್ತುಗಳು ನಮಗೆ ದೊರೆತಿರುವುದರಿಂದ ಹಾಗೂ ಈಗಿನ ಚಿತ್ರದುರ್ಗ ಜಿಲ್ಲೆಯ ಎರಡು ಕಡೆ ನಡೆದ ಭೂ ಶೋಧನೆಯಿಂದ ತುಲನಾತ್ಮಕ ಅಧ್ಯಯನ ಮಾಡಿ ಶಾತವಾಹನರ ಚರಿತ್ರೆಯನ್ನು ನಿರೂಪಿಸಬಹುದು. ಚಿತ್ರದುರ್ಗ ಜಿಲ್ಲೆಯ ಚಿಪ್ಪಿನಕೆರೆಯ

ಅನ್ವೇಷಣೆ ನಡೆಸಿದ ಫಲವಾಗಿ ಅಲ್ಲಿ ದೊರೆತ ಶಾತವಾಹನರ ಕಾಲಕ್ಕೆ ಸೇರಿದ ಸೀಸದ ನಾಣ್ಯಗಳು, ಕಾರ್ಲೆನಿಯನ್, ಅಗೇಟ್‌ದಿಂದ ತಯಾರಿಸಲಾದ ಮಣಿಗಳು ಬಿಳಿ ಬಣ್ಣದ ಮಡಿಕೆಗಳು ದೊರೆತಿವೆ. ಚಿಪ್ಪಿನಕೆರೆ ಮತ್ತು ಆದರ ಸುತ್ತ ಮುತ್ತಲಿನ ಪ್ರದೇಶ ಶಾತವಾಹನರ ಕಾಲಕ್ಕೆ ಸೇರಿರಬಹುದೆಂದು ಊಹಿಸಿದ್ದಾರೆ.[೭] ಹಾಗೆಯೇ ಜಗಳೂರು ತಾಲ್ಲೂಕಿನ ಆಕನೂರು ಗ್ರಾಮದ ಬಳಿ ಇದೇ ಕಾಲದ ಬಿಳಿ ಬಣ್ಣದ ರೇಖಾ ಚಿತ್ರಗಳನ್ನೊಳಗೊಂಡ ಮಡಿಕೆಗಳು ದೊರೆತಿವೆ.[೮] ಚಿತ್ರದುರ್ಗ ಜಿಲ್ಲೆಯ ಮೊಳಕಾಲ್ಮೂರು ತಾಲ್ಲೂಕಿನ ಬ್ರಹ್ಮಗಿರಿ ಮತ್ತು ಚಿತ್ರದುರ್ಗ ಸಮೀಪದ ಚಂದ್ರವಳ್ಳಿ ಉತ್ಖನನಗಳಿಂದಾಗಿ ಶಾತವಾಹನರ ಆಳ್ವಿಕೆ ಮೇಲೆ ಹೆಚ್ಚಿನ ಬೆಳಕು ಬೀರಿದಂತಾಗಿದೆ. ಜಗಳೂರು ತಾಲ್ಲೂಕಿನ ಆಕನೂರು ಹಾಗೂ ಹೊನ್ನಾಳಿ ತಾಲ್ಲೂಕಿನ ಬೆಳಗುತ್ತಿಯಲ್ಲಿ ಇವರ ಕಾಲಕ್ಕೆ ಸೇರಿದ ಮಡಕೆ ಚೂರುಗಳು ದೊರೆತಿವೆ. ಹೀಗೆ ಈ ತಾಲ್ಲೂಕಿನಲ್ಲಿ ಈ ರಾಜರ ಆಳ್ವಿಕೆಗೆ ಸಂಬಂಧಿಸಿದಂತೆ ಹೆಚ್ಚು ಸ್ಪಷ್ಟ ಆಧಾರಗಳು ದೊರೆಯದೆ ಇದ್ದರೂ ಸಹ ಸಮೀಪದ ಚಿತ್ರದುರ್ಗದಲ್ಲಿ ಸ್ಪಷ್ಟ ಆಧಾರಗಳು ದೊರೆತಿವೆ. ಈ ಅವಶೇಷಗಳ ಆಧಾರದಿಂದ ಜಗಳೂರು ತಾಲ್ಲೂಕಿನವರೆಗೂ ಶಾತವಾಹನರ ಆಳ್ವಿಕೆ ವಿಸ್ತರಿಸಿತ್ತೆಂದು ಹೇಳಬಹುದು.

### ಕದಂಬರ ಆಳ್ವಿಕೆ

ಕರ್ನಾಟಕದ ಚರಿತ್ರೆಯಲ್ಲಿ ಇತರ ರಾಜ ವಂಶಗಳಂತೆ ಕದಂಬರು ಕ್ರಿ.ಶ.೪ರಿಂದ ೬ನೇ ಶತಮಾನದವರೆಗೆ ಆಳ್ವಿಕೆ ನಡೆಸಿ ತಮ್ಮದೇ ಆದ ಸ್ಥಾನಮಾನಗಳಿಸಿಕೊಂಡಿದ್ದಾರೆ. ಜಗಳೂರು ತಾಲ್ಲೂಕು ಇವರ ಆಳ್ವಿಕೆಗೆ ಒಳಪಟ್ಟಿತ್ತು ಎಂಬುದಕ್ಕೆ ಯಾವುದೇ ಸ್ಪಷ್ಟ ಆಧಾರಗಳಿಲ್ಲ. ಆದರೂ ಸಹ ಪಕ್ಕದ ಚಿತ್ರದುರ್ಗ, ದಾವಣಗೆರೆಗಳಲ್ಲಿ ದೊರೆತ ಆಧಾರಗಳಿಂದ ಕದಂಬರ ಆಳ್ವಿಕೆ ಇಲ್ಲಿಯವರೆಗೆ ವಿಸ್ತರಿಸಿತ್ತೆಂದು ಹೇಳಬಹುದು. ಕದಂಬ ರಾಜ್ಯ ಸಂಸ್ಥಾಪಕನೆಂಬ ಕೀರ್ತಿ ಪಡೆದ ಮಯೂರಶರ್ಮನ ಶಾಸನ ಚಿತ್ರದುರ್ಗ ಬೆಟ್ಟದ ಪಶ್ಚಿಮ ತಪ್ಪಲಿನ ಚಂದ್ರವಳ್ಳಿ ಬಳಿ ಇರುವ ಎತ್ತರದ ಬಂಡೆಯಲ್ಲಿ ದೊರೆತಿದೆ. ಈ ಶಾಸನ ಕದಂಬರ ಆರಂಭದ ಇತಿಹಾಸವನ್ನು ತಿಳಿಸುವಲ್ಲಿ ಅಮೂಲ್ಯವೆನಿಸಿದೆ.[೯] ಇದಕ್ಕೂ ಪ್ರಮುಖ ಹಾಗೂ ಮಹತ್ವವಾದುದು ದಾವಣಗೆರೆ ತಾಲ್ಲೂಕು ಅಣಜಿಯಲ್ಲಿ ದೊರೆತಿರುವ ಶಿವನಂದನವರ್ಮನ ಶಾಸನ ಇದು ಕದಂಬ ಕೃಷ್ಣವರ್ಮನಿಗೂ ನೊಣಕ್ಕಸ ಪಲ್ಲವನಿಗೂ ತುಮುಲ ಯುದ್ಧ ನಡೆದ ಬಗ್ಗೆ ವಿವರಿಸುತ್ತದೆ.[೧೦] ಅಣಜಿಯಲ್ಲಿನ ಕೋಟೆ ಮತ್ತು ಕೆಲ ಅವಶೇಷಗಳು ಇವರ ಕಾಲದ್ದೆನ್ನಬಹುದು.[೧೧]

ಜಗಳೂರು ತಾಲ್ಲೂಕಿನಲ್ಲಿ ನೇರವಾಗಿ ಯಾವುದೇ ಆಧಾರಗಳು ದೊರೆಯದಿದ್ದಾಗ್ಯೂ ಈ ಮೇಲಿನ ಸ್ಪಷ್ಟ ಆಧಾರಗಳಿಂದ ಈ ಪ್ರದೇಶವು ಸಹ ಪಕ್ಕದಲ್ಲಿರುವುದರಿಂದ ಕದಂಬರ ಆಳ್ವಿಕೆಗೆ ಒಳಪಟ್ಟಿರಬಹುದೆಂದು ಹೇಳಬಹುದು.

### ಬಾದಾಮಿ ಚಾಲುಕ್ಯರ ಆಳ್ವಿಕೆ

ಕನ್ನಡ ನಾಡಿನ ಅರಸು ಮನೆತನಗಳಲ್ಲಿ ಚಾಲುಕ್ಯ ಮನೆತನವು ಒಂದು. ಕ್ರಿ.ಶ. ೬ನೇ ಶತಮಾನದಿಂದ ಕ್ರಿ.ಶ. ೮ನೇ ಶತಮಾನದವರೆಗೆ ಪುನಃ ಕ್ರಿ.ಶ.೧೦ನೇ ಶತಮಾನದಿಂದ ಕ್ರಿ.ಶ.೧೨ನೇ

ಶತಮಾನದವರೆಗೆ ಆಳ್ವಿಕೆ ನಡೆಸಿರುವ ಬಾದಾಮಿ ಚಾಲುಕ್ಯರು ತಮ್ಮ ಆಳ್ವಿಕೆ ಅವಧಿಯಲ್ಲಿ ದಾವಣಗೆರೆ ಜಿಲ್ಲೆಯ ಕೆಲವು ಪ್ರದೇಶಗಳನ್ನು ತಮ್ಮ ಹಿಡಿತದಲ್ಲಿಟ್ಟುಕೊಂಡಿದ್ದರೆಂಬುದನ್ನು ಕೆಲವು ಶಾಸನಗಳಿಂದ ತಿಳಿಯಬಹುದು. ಜಯಸಿಂಹ ಬಾದಾಮಿ ಚಾಲುಕ್ಯರ ಮೂಲ ಪುರುಷ. ಇವನ ಬಗ್ಗೆ ಖಚಿತ ಸಂಗತಿಗಳಿಲ್ಲ. ಇವನ ನಂತರ ಅಧಿಕಾರಕ್ಕೆ ಬಂದ ಮೊದಲನೇ ಪುಲಕೇಶಿ ಕ್ರಿ.ಶ.೫೪೦ ರಿಂದ ೫೬೬ರವರೆಗೆ ಸಮರ್ಥ ದೊರೆ ಎಂದು ಬಾದಾಮಿ ಶಾಸನದಿಂದ ತಿಳಿಯುತ್ತದೆ.[೨] ಒಂದನೇ ಪುಲಕೇಶಿ ನಂತರ ಒಂದನೇ ವಿಕ್ರಮಾದಿತ್ಯ ಅವನ ನಂತರ ವಿನಯಾದಿತ್ಯ (ಕ್ರಿ.ಶ.೬೮೧ರಿಂದ ೬೯೬) ಅಧಿಕಾರಕ್ಕೆ ಬಂದನು. ಇವನ ಕಾಲಕ್ಕೆ ಸೇರಿದ ಶಾಸನ ಹರಿಹರದಲ್ಲಿ ದೊರೆತಿದೆ.[೩] ಇದರಲ್ಲಿ ಇವನು ಹರಿಹರದ ದೇವಾಲಯಕ್ಕೆ ದಾನ ಕೊಟ್ಟ ಬಗ್ಗೆ ವಿವರಣೆ ಇದೆ. ವಿನಯಾದಿತ್ಯನ ನಂತರ ವಿಜಯಾದಿತ್ಯನು ಅಧಿಕಾರಕ್ಕೆ ಬಂದನು. ಇವನು ದಕ್ಷಿಣದ ಮೇಲೆ ವಿಜಯ ಸಾಧಿಸಿದ ನೆನಪಿಗಾಗಿ "ಬೆ(ವೆ)ಂಗಿ ಮಂಡಲೇಶ್ವರ"ನೆಂಬ ಬಿರುದನ್ನು ಧರಿಸಿದ್ದಾನೆಂದು ಚನ್ನಗಿರಿ ಶಾಸನದಿಂದ ತಿಳಿಯುತ್ತದೆ.[೪]

ಈ ರೀತಿ ಪಕ್ಕದ ಹರಿಹರ, ಚನ್ನಗಿರಿ, ದಾವಣಗೆರೆ ಇವರ ಆಳ್ವಿಕೆಗೆ ಒಳಪಟ್ಟಾಗ ಜಗಳೂರು ಪ್ರದೇಶದವರೆಗೂ ಇವರ ಸಾಮ್ರಾಜ್ಯ ವ್ಯಾಪಿಸಿತ್ತು ಎಂದು ಹೇಳಬಹುದು.

### ರಾಷ್ಟ್ರಕೂಟರ ಆಳ್ವಿಕೆ

ಎಂಟನೇ ಶತಮಾನದ ಮಧ್ಯಭಾಗದ ವೇಳೆಗೆ ದಖ್ಖನ್ನಿನ ಅಧಿಪತ್ಯವು ಚಾಲುಕ್ಯರ ಕೈಯಿಂದ ಜಾರಿ ರಾಷ್ಟ್ರಕೂಟರ ಕೈ ಸೇರಿತು. ರಾಷ್ಟ್ರಕೂಟ ಮನೆತನಗಳಲ್ಲಿ ಮಳಖೇಡದ ಶಾಖೆ ಪ್ರಮುಖವಾದುದು.[೫] ರಾಷ್ಟ್ರಕೂಟರ ಆಳ್ವಿಕೆ ಜಗಳೂರು ಪರಿಸರದಲ್ಲಿ ನೇರವಾಗಿ ಇರದಿದ್ದರೂ ಸುತ್ತಮುತ್ತಲ ಪ್ರದೇಶಗಳಲ್ಲಿ ದೊರೆತ ಶಾಸನಗಳ ಆಧಾರದಿಂದ ಈ ಪ್ರದೇಶವು ರಾಷ್ಟ್ರಕೂಟರ ಆಳ್ವಿಕೆಗೆ ಒಳಪಟ್ಟಿತ್ತು ಎಂದು ಹೇಳಬಹುದು. ಕೋಗಳಿ ಪ್ರದೇಶ ಈಗಿನ ಹರಪನಹಳ್ಳಿ ಮತ್ತು ಬಳ್ಳಾರಿ ಜಿಲ್ಲೆಯ ಹೂವಿನ ಹಡಗಲಿ ತಾಲ್ಲೂಕುಗಳನ್ನು ಒಳಗೊಂಡಿತ್ತು. ಕ್ರಿ.ಶ. ೯೭೨-೭೩ರವರೆಗೆ ಭೂತಗದೇವನ ಖೊಟ್ಟಿಗನ ಸಾಮಂತನಾಗಿ ಕೋಗಳಿಗೆ ರಾಜ್ಯಪಾಲನಾಗಿದ್ದ. ಅಮೋಘವರ್ಷನಿಗೆ ಮಾರಸತ್ಯನೆಂಬ ಬಿರುದಿತ್ತೆಂದು ಹೊನ್ನಾಳಿ ತಾಲ್ಲೂಕಿನಲ್ಲಿ ದೊರೆತ ಶಾಸನದಿಂದ ತಿಳಿಯಬಹುದು. ಈ ಶಾಸನದಲ್ಲಿ "....ರಸ ಮಾರಸತ್ಯ" ಎಂದು ಉಲ್ಲೇಖಿತವಾಗಿದೆ.[೬] ಪಕ್ಕದ ಹರಪನಹಳ್ಳಿ ತಾಲ್ಲೂಕು ಚಿರಸ್ತಹಳ್ಳಿ ಗ್ರಾಮದ ಶಂಕರಸ್ವಾಮಿ ಗುಡಿಯ ಶಾಸನದ ಪ್ರಕಾರ ಕ್ರಿ.ಶ. ೯೩೧-೯೩೨ರಲ್ಲಿ ಯುದ್ಧ ಚಟನಾದ ಪಾಡಿಗೆ ನೊಳಂಬ ಎನ್ನುವನು ಚೆರೆಯವರ ಆಕ್ರಮಣದ ವಿರುದ್ಧ ಹೋರಾಟ ಮಾಡಿದ. ಆಗ ರಾಷ್ಟ್ರಕೂಟರ ಆಳ್ವಿಕೆಗೆ ಒಳಪಟ್ಟ ಈ ಪ್ರದೇಶದಲ್ಲಿ ಮೃತನ ಕುಟುಂಬಕ್ಕೆ ಕೆಲ ನೀರಾವರಿ ಪ್ರದೇಶ ಮತ್ತು ಒಣ ಭೂಮಿಯನ್ನು ಕೊಟ್ಟಿರುವುದು ತಿಳಿದು ಬರುತ್ತದೆ.

ಕೊಗ್ಗನೊರು, ಮಸಣಕೆರೆ, ಚದುರುಗೋಳ ಇವರ ಶೈಲಿಯ ಮುಂತಾದ ಪ್ರದೇಶಗಳಲ್ಲಿ ದೇವಾಲಯಗಳು ಕಂಡುಬಂದಿವೆ. ಇವುಗಳ ಆಧಾರದಿಂವ ಜಗಳೂರು ಹಾಗೂ ಅದರ ಆಸುಪಾಸಿನ ಪ್ರದೇಶವನ್ನು ತಮ್ಮ ಆಳ್ವಿಕೆಗೆ ಒಳಪಡಿಸಿಕೊಂಡಿದ್ದರು ಎನ್ನಬಹುದು.

## ನೊಳಂಬರ ಆಳ್ವಿಕೆ

ಗಂಗ, ಚಾಲುಕ್ಯ, ಚೋಳ ಮತ್ತು ಹೊಯ್ಸಳರ ಮಹಾಸಾಮಂತರಾಗಿ ನೊಳಂಬರು ನೊಳಂಬವಾಡಿ ಅಥವಾ ನೊಳಂಬವಾಡಿ ೩೨೦೦ ನಾಡುನ್ನು ಆಳುತ್ತಿದ್ದರು. ಈ ಪ್ರದೇಶದಲ್ಲಿ ದೊರೆತಿರುವ ಶಾಸನಗಳ ಆಧಾರದಿಂದ ನೊಳಂಬರು ಇಲ್ಲಿ ಆಳ್ವಿಕೆ ನಡೆಸಿದ್ದರು ಎಂದು ಹೇಳಬಹುದು. ನೊಳಂಬರಿಗೆ ಸಂಬಂಧಿಸಿದ ಅತ್ಯಂತ ಪ್ರಾಚೀನ ಶಿಲಾ ಶಾಸನವು ಅಣಜಿಯ ಗುಡ್ಡಪ್ಪನ ಹೊಲದಲ್ಲಿ ದೊರೆತಿದೆ.[೧೭] ಇದರಲ್ಲಿ ಪಲ್ಲವ ನನಕ್ಕಸರಾಜನು ಕೃಷ್ಣವರ್ಮನ ರಾಜನ ಸೈನ್ಯವನ್ನು ಪರಾಭವಗೊಳಿಸಿದನೆಂದು ಉಲ್ಲೇಖಿತವಾಗಿದೆ.

ಜಗಳೂರು ತಾಲ್ಲೂಕು ಮುಷ್ಟೂರಿನ ಕಲ್ಲೇಶ್ವರ ದೇವಾಲಯದ ಶಾಸನವು ಕ್ರಿ.ಶ. ೯೨೦ರ ನೊಳಂಬಾಧಿರಾಜ ಅಯ್ಯಪ್ಪದೇವ ನೊಳಂಬವಾಡಿ ಮತ್ತಿತರ ನಾಡುಗಳನ್ನು ಆಳುತ್ತಿದ್ದ ವಿಷಯವಿದೆ.[೧೮] ಎರಡನೇ ಶಾಸನವು ಜವಯ್ಯನ ಮಗ ನಾಥವರ್ಮನು ಮುಷ್ಟೂರಿನ ಕಲ್ಲೇಶ್ವರ ದೇವಾಲಯವನ್ನು ಜೀರ್ಣೋದ್ಧಾರ ಮಾಡಿದ ಉಲ್ಲೇಖವಿದೆ. ಕ್ರಿ.ಶ.೧೫೦೪ರ ಅಸಗೋಡು ಶಂಭುಲಿಂಗ ದೇವಾಲಯದ ಶಾಸನದಲ್ಲಿ[೧೯] 'ಪಲ್ಲವ ಕುಲ ವೈಭವ ನರಸಿಂಗದೇವನು ಚಾಲುಕ್ಯ ತ್ರೈಲೋಕ್ಯದೇವನ ಪಾದ ಕಮಲಗಳಲ್ಲಿ ಆಶ್ರಯ ಪಡೆದು ಅನೇಕ ಪ್ರಾಂತ್ಯಗಳನ್ನು ವೈಭವದಿಂದ ಆಳುತ್ತಿದ್ದನೆಂದು' ತಿಳಿದುಬಂದಿದೆ. ಇದೇ ಶಾಸನದಿಂದ ಅಸಗೋಡಿನ ಸ್ವಯಂಭು ದೇವಾಲಯಕ್ಕೆ ಮತ್ತು ಕಾಳಮುಖ ಸ್ಥಾನ ಕರ್ತಾರ ಮಠಕ್ಕೆ ನೀಡಿದ ವತ್ತಿ ಈ ದೇವಾಲಯದ ನಿರ್ಮಾಣದ ಮೇಲ್ವಿಚಾರಣೆ ನಡೆಸಿದ ಅಬ್ಬೋಜನಿಗೆ ನೀಡಿದ ಸಂಭಾವನೆಯ ವಿಷಯಗಳು ಈ ಶಾಸನದಲ್ಲಿ ನಿರೂಪಿಸಲ್ಪಟ್ಟಿವೆ. ಈ ಮೇಲಿನ ಅಂಶಗಳಿಂದ ಜಗಳೂರು ಪರಿಸರದಲ್ಲಿ ನೊಳಂಬರು ಆಳ್ವಿಕೆ ಮಾಡಿದ್ದಾರೆ ಹಾಗೂ ಕರ್ನಾಟಕದ ಸಾಮಂತ ರಾಜ ಮನೆತನಗಳಲ್ಲಿ ವಿಶಿಷ್ಟ ಸ್ಥಾನ ಪಡೆದಿರುವುದನ್ನು ನೋಡಬಹುದು.

## ಸೇವುಣರ ಆಳ್ವಿಕೆ

ಕ್ರಿ.ಶ.ಸುಮಾರು ೮೩೫-೧೩೧೨ರವರೆಗೆ ಆಳಿದ ಕರ್ನಾಟಕದ ಸೇವುಣರು ವಿಶೇಷವಾಗಿ ದೇವಗಿರಿಯ ಯಾದವರೆಂದೇ ಭಾರತದ ಇತಿಹಾಸದಲ್ಲಿ ಪ್ರಸಿದ್ಧರಾಗಿದ್ದಾರೆ. ಮಹಮ್ಮದೀಯ ಚರಿತ್ರೆಕಾರರಾದ ಅಮೀರ್‌ಖುಸ್ರು, ಫೆರಿಸ್ತ, ಬರನಿ ಮುಂತಾದವರು ಅವರನ್ನು ಯಾದವರೆಂದೆ ಕರೆದಿದ್ದಾರೆ. ದೇವಗಿರಿಯ ಸೇವುಣರನ್ನು ಕುರಿತ ಶಾಸನಗಳು ಮತ್ತು ಅವರು ಕಟ್ಟಿಸಿದ ದೇವಾಲಯಗಳು ಕರ್ನಾಟಕದ ಹಲವಾರು ಪ್ರದೇಶಗಳಲ್ಲಿ ದೊರೆತಿವೆ. ದಾವಣಗೆರೆ ಜಿಲ್ಲೆಯ ಜಗಳೂರು, ಹರಪನಹಳ್ಳಿ, ಚನ್ನಗಿರಿ, ಹೊನ್ನಾಳಿಗಳಲ್ಲಿ ಇವರ ಶಾಸನಗಳು ದೊರೆತಿರುವುದರಿಂದ ಜಗಳೂರು ಪರಿಸರವು ಸಹ ಅವರ ಅಧೀನಕ್ಕೊಳಪಟ್ಟಿತ್ತೆಂದು ಸ್ಪಷ್ಟವಾಗುತ್ತದೆ. ಸೇವುಣರ ರಾಜ್ಯವು ಪಕ್ಕದ ಚಿತ್ರದುರ್ಗ, ಶಿವಮೊಗ್ಗ, ಧಾರವಾಡ, ಹಾಸನ, ಬಿಜಾಪುರ ರಾಯಚೂರು, ಬಳ್ಳಾರಿ ಜಿಲ್ಲೆಗಳ ಪ್ರದೇಶವನ್ನು ಒಳಗೊಂಡಿತು.[೨೦]

ಹರಿಹರ ಹಾಗೂ ಬಾನುವಳ್ಳಿಯ ಶಾಸನಗಳಲ್ಲಿ ಸೇವುಣರ ವಂಶದ ಪೀಳಿಗೆಯನ್ನು ನೀಡಿದೆ. ಇದರ ಪ್ರಕಾರ ಬಿಲ್ಲಮ ಈ ವಂಶದ ಮೊದಲ ಅರಸ. ಜಗಳೂರು ತಾಲ್ಲೂಕು ಕಲ್ಲೇದೇವರಪುರದ ಶಾಸನವು

ಕ್ರಿ.ಶ. ೧೨೬೯ರದ್ದಾಗಿದ್ದು. ಅರಸನನ್ನು ಸೈನ್ಯಸಮಯಸಂವರ್ದನ, ಸಕಳಸಮಯ, ಸಮುದ್ಧರಣ, ಕ್ಷಿತಿಪತಿ, ಮಾತಂಗ, ಪೆಂಡಾರ, ಲಕ್ಷ್ಮಿದೇವ ತ್ರಿಕುಳ ಮತ್ತು ಕುಳಕಾಂತರ ಮುಂತಾದ ಆಕರ್ಷಕ ಹೆಸರಿನಿಂದ ಉಲ್ಲೇಖಿಸಿರುವುದು ಕಂಡುಬಂದಿದೆ. ಈ ಎಲ್ಲಾ ಅಂಶಗಳನ್ನು ನೋಡಿದರೆ ಕಣಕುಪ್ಪೆ ಪರಿಸರವು ಸ್ಪಷ್ಟವಾಗಿ ಸೇವುಣರ ಆಡಳಿತಕ್ಕೆ ಒಳಪಟ್ಟಿತ್ತು ಎಂದು ಹೇಳಬಹುದು.

## ಹೊಯ್ಸಳರ ಆಳ್ವಿಕೆ

ಕರ್ನಾಟಕ ರಾಜಮನೆತನಗಳಲ್ಲಿ ಕ್ರಿ.ಶ.೧೦೦೦-೧೩೪೬ರವರೆಗೆ ಆಳ್ವಿಕೆ ಮಾಡಿದ ಹೊಯ್ಸಳರ ಸ್ಥಾನ ಮಹತ್ವವಾದದ್ದು. ಹೊಯ್ಸಳರು ಚಾಲುಕ್ಯರ ಸಾಮಂತರಾಗಿದ್ದಾಗಲೇ ನೊಳಂಬವಾಡಿಯು ಅಂದರೆ ಚಿತ್ರದುರ್ಗ, ದಾವಣಗೆರೆ ಪ್ರದೇಶಗಳು ಗಮನಸೆಳೆದಿದ್ದವು. ಪ್ರಸ್ತುತ ದಾವಣಗೆರೆ ಜಿಲ್ಲೆಯಲ್ಲಿ ಹೊಯ್ಸಳರ ಆಳ್ವಿಕೆಯನ್ನು ಗುರುತಿಸಲು ಇಲ್ಲಿ ನಿರ್ಮಾಣಗೊಂಡ ಕೆರೆ, ಕಾಲುವೆ, ಶಾಸನ, ದೇವಾಲಯ, ಅಗ್ರಹಾರಗಳು, ಸಹಕಾರಿಯಾಗಿವೆ. ಕೇವಲ ರಾಜಕೀಯವಲ್ಲದೆ ಜಿಲ್ಲೆಯ ಸಾಮಾಜಿಕ ಹಾಗೂ ಸಾಂಸ್ಕೃತಿಕ ಕ್ಷೇತ್ರಗಳಿಗೆ ಹೊಯ್ಸಳರ ಕೊಡುಗೆಯು ಮಹತ್ವವಾದದ್ದು ಎಂಬುದು ಶಾಸನಗಳಿಂದ ವ್ಯಕ್ತವಾಗುತ್ತದೆ. ಇಮ್ಮಡಿ ನರಸಿಂಹನ ತರುವಾಯ ಅವನ ಮಗ ಸೋಮೇಶ್ವರನು ಕ್ರಿ.ಶ. (೧೨೩೪-೧೨೬೩)ರಲ್ಲಿ ಪಟ್ಟಕ್ಕೆ ಬಂದನು. ಜಗಳೂರು ತಾಲ್ಲೂಕಿನ ಕಲ್ಲೇದೇವರಪುರದ ಕಲ್ಲೇಶ್ವರ ದೇವಾಲಯದ ಸಮೀಪದಲ್ಲಿರುವ ಶಾಸನವು ಸೋಮೇಶ್ವರನಿಗೆ ಸಂಬಂಧಿಸಿದ ಮೊದಲ ಶಾಸನ.[೨೦] ಅವನು ಪಟ್ಟಕ್ಕೆ ಬಂದ ವರುಷದಲ್ಲೇ ಈ ಶಾಸನ ಬರೆಸಲಾಗಿದೆ. ಸೋಮೇಶ್ವರನೂ ಸಹ ಗಂಗವಾಡಿ ೯೬೦೦೦ ಮತ್ತು ನೊಳಂಬವಾಡಿ ೩೨೦೦೦ ನಾಡುಗಳನ್ನು ಆಳುತ್ತಿದ್ದು ಸಾಮಾನ್ಯವಾಗಿ ಹೊಯ್ಸಳ ಅರಸರೆಲ್ಲರೂ ಧರಿಸಿದ್ದ ಬಿರುದುಗಳನ್ನು ಈ ಶಾಸನದಲ್ಲಿ ಕಾಣಬಹುದು. ಈ ಶಾಸನದ ಲಿಪಿ ಅಳಿಸಿ ಹೋಗಿರುವುದರಿಂದ ಸಿಕ್ಕುವ ವಿವರಗಳು ಅಲ್ಪ, ನಾರಸಿಂಗಯ್ಯನಾಯಕ ಮತ್ತು ಮಲ್ಲಯ್ಯನಾಯಕರು ಬೆಮ್ಮತ್ತನೂರು ದುರ್ಗದ ಸ್ವಯಂಭುವನೇಶ್ವರ ದೇವಿಗೆ ದತ್ತಿ ಕೊಟ್ಟುದುದನ್ನು ಅದು ತಿಳಿಸುತ್ತದೆ. ಇವರ ಕಾಲಕ್ಕೆ ಸಂಬಂಧಿಸಿದ ಶಾಸನಗಳು ಪಕ್ಕದ ಹೊಳಲ್ಕೆರೆ, ಹಿರಿಯೂರು, ಹರಿಹರ, ಚಿತ್ರದುರ್ಗ, ದಾವಣಗೆರೆಗಳಲ್ಲಿ ದೊರೆತಿವೆ. ಇವುಗಳ ಆಧಾರದ ಮೇಲೆ ಕಣಕುಪ್ಪೆ ಪರಿಸರವೂ ಸಹ ಇವರ ಆಳ್ವಿಕೆ ಒಳಪಟ್ಟಿತ್ತೆಂದು ದೃಢವಾಗಿ ಹೇಳಬಹುದು.

## ವಿಜಯನಗರ ಅರಸರ ಆಳ್ವಿಕೆ

ಹೊಯ್ಸಳ ಸಾಮ್ರಾಜ್ಯ ಪತನ ಹೊಂದಿದ ತರುವಾಯ ಹಿಂದೂಧರ್ಮ ರಕ್ಷಣೆಗೆಂದು ವಿಜಯನಗರ ಸಾಮ್ರಾಜ್ಯ ಅಸ್ತಿತ್ವಕ್ಕೆ ಬಂದಿತು. ಇದನ್ನ ಮರೆತುಹೋದ ಹಾಗೂ ಎಂದೆಂದೂ ಮರೆಯಲಾಗದ ಮಹಾಸಾಮ್ರಾಜ್ಯವೆಂದು ವಿದ್ವಾಂಸರು ಬಣ್ಣಿಸಿದ್ದಾರೆ.[೨೧] ಕಣಕುಪ್ಪೆ ಪರಿಸರದಲ್ಲಿ ವಿಜಯನಗರದ ಅರಸರು ನೇರವಾಗಿ ಇಲ್ಲವೇ ಪರೋಕ್ಷವಾಗಿ ತಮ್ಮ ಅಧಿಕಾರವನ್ನು ಸ್ಥಾಪಿಸಿದ್ದರು. "ಬೆಮ್ಮತ್ತನ ಕಲ್ಲನ್ನು" ಕೇಂದ್ರವನ್ನಾಗಿ ಮಾಡಿಕೊಂಡು ವಿಜಯನಗರದ ಪ್ರತಿನಿಧಿ "ಮಲ್ಲಿನಾಥ ಒಡೆಯ"ನೆಂಬುವನು ಆಡಳಿತ ನಡೆಸುತ್ತಿದ್ದನೆಂದು ತಿಳಿದು ಬರುತ್ತದೆ.[೨೨]

ಕ್ರಿ.ಶ.೧೩೩೭-೧೪೦೪ರ ವರೆಗೆ ಆಳಿದ ಇಮ್ಮಡಿ ಹರಿಹರ ಅರ್ದ ವರಹ ಹೊನ್ನು ದೊರೆತಿವೆ.[೨೪] ನಾಣ್ಯದ ಮೇಲ್ಮುಖದಲ್ಲಿ ಶಿವಪಾರ್ವತಿ ಚಿತ್ರ ಹಿಂಭಾಗದಲ್ಲಿ ಶ್ರೀ ಪ್ರತಾಪ ಹರಿಹರ ಎಂದು ನಾಗರ ಲಿಪಿಯಲ್ಲಿ ಮೂರು ಸಾಲಿನಲ್ಲಿ ಬರೆಯಲಾಗಿದೆ. ಈ ನಾಣ್ಯಗಳು ಚಿತ್ರದುರ್ಗ ಪ್ರದೇಶದಲ್ಲಿ ಮುದ್ರಿತವಾಗಿರಬಹುದೆಂದು ಅಭಿಪ್ರಾಯ. ಜಗಳೂರಿನ ೨೪ನೇ (ಕೃಷ್ಣಾಪುರದ) ಶಾಸನದಿಂದ ಕ್ರಿ.ಶ.೧೫೫೦ರಲ್ಲಿ ವಿಜಯನಗರದವರ ಕಾಲದಲ್ಲಿ ಈ ಬಿಳಿಚೋಡು, ಕೊಟ್ಟೂರು ಚಾವಡಿಯ ಉಚ್ಚಂಗಿ ವೇಂಠೆಗೆ ಸೇರಿದ ಸೀಮೆಯಾಗಿತ್ತು.[೨೫] ಅದೇ ರೀತಿ ಈ ಪರಿಸರದ ಬಿಳಿಚೋಡು ಗ್ರಾಮ ಕೃಷ್ಣದೇವರಾಯನ ನೇರ ಆಡಳಿತಕ್ಕೆ ಒಳಪಟ್ಟಿದ್ದು, ಆ ಗ್ರಾಮದ ರಾಮೇಶ್ವರ ದೇವಾಲಯದ ಬಾಗಿಲಿನ ಪೂರ್ವಕಡೆ ನೆಟ್ಟ ಕಲ್ಲಿನಿಂದ[೨೬] ಸ್ಪಷ್ಟವಾಗುತ್ತದೆ. ಇದರಲ್ಲಿ ಕೃಷ್ಣದೇವರಾಯನ ಹೆಸರನ್ನು ಉಲ್ಲೇಖಿಸಲಾಗಿದೆ. ಈ ಶಾಸನದಲ್ಲಿ ಬಿಳಿಚೋಡು ರಾಮದೇವರ ಉಪಯೋಗಕ್ಕೆ ಬಿಳಿಚೋಡು ಹಮುದಾರ ಉತ್ತರ ಮಕ್ಕಳು ಒಂದು ಕೋಟೆ ಗ್ರಾಮವನ್ನು ದಾನ ಕೊಟ್ಟ ವಿವರ ತಿಳಿಯುತ್ತದೆ. ಅದೇ ರೀತಿ ಮತ್ತೊಂದು ಶಾಸನದಲ್ಲಿ ಎರ್ರಕೃಷ್ಣನಾಯಕನು ತನಗೆ ಸೇರಿದ್ದ ಬಿಳಿಚೋಡು ಗ್ರಾಮದ ಕುರುಬರು ಕೊಡಬೇಕಾಗಿದ್ದ ಕುರಿದರೆ (ತೆರಿಗೆ)ಯನ್ನು ತೆಗೆದುಹಾಕಿದ್ದ ವಿವರ ಇದೆ.[೨೭] ಅಲ್ಲದೆ ಕೊಣಚಗಲ್, ಕೊಡದಗುಡ್ಡ, ಅಸಗೋಡು, ಮೊದಲಾದ ಕಡೆ, ದೇವಾಲಯ, ಹೊಂಡ, ಬಾವಿ, ಶಿಲ್ಪ ಮತ್ತು ಶಾಸನಗಳು ದೊರೆತಿವೆ. ಈ ಎಲ್ಲಾ ಆಧಾರದಿಂದ ಕಣಕುಪ್ಪೆ ಪರಿಸರವು ವಿಜಯನಗರ ಸಾಮ್ರಾಜ್ಯದ ಆಳ್ವಿಕೆಗೆ ಒಳಪಟ್ಟಿತ್ತು ಎಂದು ಅಭಿಪ್ರಾಯ ಪಡಬಹುದು.

## ಪಾಳೆಯಗಾರರ ಆಳ್ವಿಕೆ

ಪ್ರಾಚೀನ ಭಾರತದ ದಕ್ಷಿಣಾಪಥದ ಪ್ರಸ್ಥಭೂಮಿಯಲ್ಲಿ ಚಿಕ್ಕಪುಟ್ಟ ಬಣಗಳ ನಾಯಕರು ಪಾಳೆಯಗಾರರೆಂಬ ಹೆಸರಿನಿಂದ ಅಲ್ಲಲ್ಲಿ ಆಳ್ವಿಕೆ ನಡೆಸಿದ್ದಾರೆ. ವಿಜಯನಗರ ಕಾಲದಲ್ಲಿ ಸಾಮಂತರಾಗಿ ಅಮರನಾಯಕರಾಗಿ ಆಳ್ವಿಕೆ ಮಾಡಿ ನಂತರ ಪಾಳೆಯಗಾರರೆನಿಸಿಕೊಂಡು ಸ್ವತಂತ್ರ ಆಳ್ವಿಕೆ ನಡೆಸಿದರು.[೨೮]

ವಿಜಯನಗರ ಸಾಮ್ರಾಜ್ಯದ ಕಾಲದಲ್ಲಿ ಅಸ್ತಿತ್ವಕ್ಕೆ ಬಂದ ಸಂಸ್ಥಾನಗಳಲ್ಲಿ ಚಿತ್ರದುರ್ಗವೂ ಒಂದು. ಈ ಮನೆತನದ ೧೪ ಜನ ಪಾಳೆಯಗಾರರು ಸುಮಾರು ೨೧೧ ವರ್ಷಗಳ ಕಾಲ ವಿಜಯನಗರದ ಅರಸರು ಹಾಕಿಕೊಟ್ಟ ಮಾರ್ಗದಲ್ಲಿ ಮುನ್ನಡೆದು ಅವರ ಸಂಸ್ಕೃತಿ ಮತ್ತು ಪರಂಪರೆಯನ್ನು ಮುಂದುವರೆಸಿದರೆಂದು ಹೇಳಬಹುದು. ಇವರು ವಾಲ್ಮೀಕಿ ಮತಸ್ಥರೂ, ಕಾಮಗೇತಿ ವಂಶಜರೂ ಆಗಿದ್ದು "ಕಸ್ತೂರಿ" ಎಂಬ ಅಭಿಧಾನವನ್ನು "ಶ್ರಿಮನ್ಮಹಾನಾಯಕಾಚಾರ್ಯ" ಎಂಬ ಬಿರುದನ್ನು ಧರಿಸಿಕೊಂಡು ಇತಿಹಾಸದಲ್ಲಿ ಮದಕರಿನಾಯಕರೆಂದೇ ಪ್ರಸಿದ್ಧರಾಗಿದ್ದಾರೆ.

ಕಣಕುಪ್ಪೆ ಪರಿಸರದಲ್ಲಿ ಇವರ ಕಾಲದಲ್ಲಿ ಅನೇಕ ಪ್ರಜಾಹಿತ ಕಾರ್ಯಗಳು ನಡೆದವು. ದೇವಾಲಯಗಳು, ಕೆರೆಗಳು, ಮಠ-ಮಾನ್ಯಗಳು, ಕೋಟೆ-ಕೊತ್ತಲಗಳು, ಶಿಲ್ಪಗಳು ಇವರ ಕಾಲದಲ್ಲಿ ನಿರ್ಮಾಣಗೊಂಡವು. ಇವರು ಚಿತ್ರದುರ್ಗದಲ್ಲಿ ಮಾತ್ರವಲ್ಲದೆ. ಸುತ್ತಲ ಪ್ರದೇಶಗಳಿಂದ ದಾವಣಗೆರೆ, ತುಮಕೂರು, ಶಿವಮೊಗ್ಗ, ಚಿಕ್ಕಮಂಗಳೂರು, ಬಳ್ಳಾರಿ ಜಿಲ್ಲೆಗಳಲ್ಲಿ ತಮ್ಮ ಅಧಿಪತ್ಯ ಸ್ಥಾಪಿಸಿದರೆಂದು ಶಾಸನಗಳಿಂದ ತಿಳಿಯುತ್ತದೆ.

## ಕೊನೆಟಿಪ್ಪಣಿ

೦೧. ಕಲಬುರ್ಗಿ ಎಂ.ಎಂ., ಕರ್ನಾಟಕದ ಕೈಫಿಯತ್ತುಗಳು, ಪುಟ-೨೯

೦೨. ಸುಂದರ ಅ.(ಸಂ).,ಕರ್ನಾಟಕ ಚರಿತ್ರೆ, ಸಂಪುಟ೧, ೧೯೯೭, ಪುಟ-೯೫

೦೩. ಕನ್ನಡ ಪ್ರಭ, ದಿನಪತ್ರಿಕೆ, ಸುಂದರ ಅ.(ಸಂ)., ದಿನಾಂಕ ೫.೪.೧೯೯೭

೦೪. ಸತ್ಯನ್ ಬಿ.ಎನ್. (ಸಂ)., ಚಿತ್ರದುರ್ಗ ಡಿಸ್ಟ್ರಿಕ್ಟ್ ಗ್ಯಾಜೆಟಿಯರ್, ೧೯೭೫, ಪುಟ-೨೨

೦೫. ಗಿರಿಜ ಟಿ., ಚಿತ್ರದುರ್ಗ ಜಿಲ್ಲಾದರ್ಶನಿ, ೧೯೯೧, ಪುಟ-೨೮೭

೦೬. ಅದೇ, ಪುಟ-೫೬೨, ೫೭೨, ೫೭೩

೦೭. ಪಿಳ್ಳೆ ಕೆ.ಕೆ., ದಕ್ಷಿಣ ಭಾರತದ ಇತಿಹಾಸ, ಪುಟ-೪೭

೦೮. ಸೋಮಶೇಖರ ಎಸ್.ವೈ., ಆಕನೂರು ಗ್ರಾಮದ ಬಳಿ ಆದಿ ಇತಿಹಾಸದ ಕುರುಹುಗಳು, ಇ.ದ., ೧೯೯೭, (ಸಂ-೧೨), ಪುಟ-೧೨,೧೩

೦೯. ಎಂ.ಎ.ಆರ್, ೧೯೨೯, ಪುಟ-೫೦

೧೦. ಎಫಿಗ್ರಾಫಿಯಾ ಕರ್ನಾಟಕ, ಸಂಪುಟ-೧೧, ಶಾಸನ ಸಂಖ್ಯೆ-೬

೧೧. ಗಿರಿಜ ಟಿ., ಪೂರ್ವೋಕ್ತ, ಪುಟ-೭೫

೧೨. ದಿವಾಕರ್ ಆರ್.ಆರ್, ಕರ್ನಾಟಕ ಥ್ರೂದ ಎಜೆಸ್, ಪುಟ-೧೯೮

೧೩. ಎ.ಕ.ಸಂ-೧೧, ಶಾ.ಸ-೬೬

೧೪. ಸುಂದರ ಅ.(ಸಂ)., ಪೂರ್ವೋಕ್ತ ಸಂಪುಟ-೨, ೧೯೯೭, ಪುಟ-೩೫

೧೫. ಎ.ಕ.ಸಂ-೭, ಭಾಗ-೧

೧೬. ಎ.ಕ. ಸಂ-೭, ಹೊನ್ನಾಳಿ, ಶಾಸನ-೧೩

೧೭. ಎ.ಕ. ಸಂ-೧೧, ದಾವಣಗೆರೆ, ಶಾಸನ-೧೬೧

೧೮. ಎ.ಕ. ಸಂ-೧೧, ಜಗಳೂರು, ಶಾಸನ-೨೯

೧೯. ಅದೇ, ಶಾಸನ ಸಂಖ್ಯೆ-೧೦

೨೦. ಕರ್ನಾಟಕ ಚರಿತ್ರೆ ಸಂಪುಟ-೩, ಪುಟ-೯೯೭

೨೧. ಎ.ಕ. ಸಂ-೧೧, ಜಗಳೂರು, ಶಾಸನ-೩೩

೨೨. ಬಾಲಸುಬ್ರಮಣ್ಯಂ (ಅನು) ಮರೆಯಲಾಗದ ಮಹಾ ಸಾಮ್ರಾಜ್ಯ, ೧೯೯೯, ಪುಟ-೧

೨೩. ಎ.ಕ. ಸಂ-೧೧, ಜಗಳೂರು, ಶಾಸನ-೪೩

೨೪. ಗಿರಿಜ ಟಿ., ದಾವಣಗೆರೆ ಇದು ನಮ್ಮ ಜಿಲ್ಲೆ, ಪುಟ-೬೪೯

೨೫. ಗಿರಿಜ ಟಿ., ದಾವಣಗೆರೆ ಇದು ನಮ್ಮ ಜಿಲ್ಲೆ, ಪುಟ-೬೪೦

೨೬. ಎ.ಕ. ಸಂ-೧೧, ಜಗಳೂರು, ಶಾಸನ-೦೧

೨೭. ಎ.ಕ. ಸಂ-೧೧, ಜಗಳೂರು, ಶಾಸನ-೮೦

೨೮. ವಿರೂಪಾಕ್ಷಿ ಪೂಜಾರಹಳ್ಳಿ-೨೦೦೨, ಚಿತ್ರದುರ್ಗ ಜಿಲ್ಲೆಯ ಬುಡಕಟ್ಟು ವೀರರು ಪುಟ-

# ಅಧ್ಯಾಯ - ಮೂರು

## ಕಣಕುಪ್ಪೆ ಪಾಳೆಯಗಾರರು

ವಿಜಯನಗರೋತ್ತರ ಕರ್ನಾಟಕದ ಪ್ರಬಲ ಪಾಳೆಯಪಟ್ಟುಗಳಲ್ಲಿ ಚಿತ್ರದುರ್ಗ ನಾಯಕ ಅರಸರು ಪ್ರಮುಖರಾದವರು. ಇವರಲ್ಲಿ ಕೆಲವರಿಗೆ "ಮದಕರಿ ನಾಯಕರು" ಎಂತಲೂ ಪ್ರಸಿದ್ಧರಾಗಿದ್ದಾರೆ. ಚಿತ್ರದುರ್ಗವನ್ನು ಕೇಂದ್ರವಾಗಿರಿಸಿಕೊಂಡು ಒಟ್ಟು ಹದಿಮೂರು ಅರಸರು ಕ್ರಿ.ಶ. ೧೫೬೮ ರಿಂದ ೧೭೭೯ರ ವರೆಗೆ ಒಟ್ಟು ಇನ್ನೂರ ಹನ್ನೊಂದು ವರುಷಗಳ ಕಾಲ ಆಳ್ವಿಕೆ ನಡೆಸಿದರು. ವಾಲ್ಮೀಕಿಗೋತ್ರದ ಶ್ರೀ ಮನ್ಮಹಾನಾಯಕಾಚಾರ್ಯ ಕಾಮಗೇತಿ ಕಸ್ತೂರಿ ಎಂಬ ಅಭಿಧಾನವನ್ನು ತಮ್ಮ ಹೆಸರುಗಳೊಡನೆ ಧರಿಸಿಕೊಂಡುದು ಇವರ ಶಾಸನಬರಹಗಳಿಂದ ವ್ಯಕ್ತಪಡುತ್ತದೆ. ಈ ಅರಸರು ಹಗಲು ಕಗ್ಗೊಲೆ ಮಾನ್ಯ, ಗಂಡು ಗೊಡಲಿಯಸರ್ಜಾ ಚಂದ್ರಗಾವಿಛಲದಾಹ್ಯ, ಧೂಳಕೋಟೆವಜೀರ್, ಗಾದ್ರಿಮಲೆ ಹೆಬ್ಬುಲಿ ಇತ್ಯಾದಿ ಬಿರುದುಗಳಿಂದ ಪುರಸ್ಕೃತರಾಗಿದ್ದಾರೆ.[೧] ಈ ಪಾಳೆಯಗಾರರ ಅಧೀನದಲ್ಲಿಯೇ ಕಣಕುಪ್ಪೆ ಪ್ರದೇಶದಲ್ಲಿ ಆಳ್ವಿಕೆ ಮಾಡಿರುವುದು ತಿಳಿಯುತ್ತದೆ. ಚಿತ್ರದುರ್ಗದ ಪಾಳೆಯಗಾರ ದೊರೆ ಚಿಕ್ಕಣ್ಣ ನಾಯಕನ ಆಳ್ವಿಕೆಯಲ್ಲಿ ಕಣಕುಪ್ಪೆ ಪ್ರದೇಶಕ್ಕೆ ಕೋಮಾರಪ್ಪ ನಾಯಕನನ್ನು ನೇಮಕ ಮಾಡುತ್ತಾನೆ. ಜರಿಮಲೆ ಬೇಡರ ಉಪಟಳದಿಂದ ರಕ್ಷಣೆಗಾಗಿ ಅಲ್ಲಿ ಕೋಟೆ ಕಟ್ಟಲು ಚಿಕ್ಕಣ್ಣ ನಾಯಕ ಅನುಮತಿ ನೀಡುತ್ತಾನೆ. ಒಟ್ಟಾರೆಯಾಗಿ ಚಿತ್ರದುರ್ಗ ಪಾಳೆಯಗಾರರ ಅಧೀನದಲ್ಲಿಯೇ ಅವರ ಮಾರ್ಗದರ್ಶನದಂತೆ ಆಳ್ವಿಕೆ ಮಾಡಿರುವುದು ತಿಳಿದುಬರುತ್ತದೆ.

ಸ್ಥಳೀಯ ಪಾಳೆಯ ಪಟ್ಟುಗಳನ್ನು ಕುರಿತು ವಿಶ್ಲೇಷಿಸುವ ಮುನ್ನ ಪಾಳೆಯ ಪಟ್ಟುವಿನ ಹುಟ್ಟು ಬೆಳವಣಿಗೆ ಮತ್ತು ಅರ್ಥಗಳನ್ನು ತಿಳಿದುಕೊಳ್ಳಬೇಕಾಗುತ್ತದೆ. ಪಾಳೆಯ ಎಂದರೆ ಸೈನ್ಯ, ಪಟ್ಟು ಎಂದರೆ 'ಶಿಬಿರ ವಿಶ್ವಕೋಶ'ಗಳಲ್ಲಿ ಪಾಳೆ, ಪಾಳೆಯವು, ಪಾಳ್ಯೇ, ಪಾಳ್ಯ, ಅರಸು ಬಿಡುವ ಪಾಳೆಯ ಎಂಬುದಾಗಿ ವರ್ಣಿತವಾಗಿದೆ.[೨] ಇಂಥ ಪಾಳೆಯ ಪಟ್ಟಿನ ಅಧೀನದಲ್ಲಿ ಅಶ್ವ, ಗಜಶಾಲೆ, ಬೊಕ್ಕಸ, ಆಸ್ಥಾನ ಮತ್ತು ಪುಟ್ಟಕೋಟೆ ಇರುತ್ತದೆ. ರೈತ, ವ್ಯಾಪಾರಗಾರ, ರಾಯಸದವ, ಶಿಲ್ಪಿ, ಓಲೆಕಾರ,

ಛತ್ರಿ, ಓಲಗ, ತಾಳ, ಮೇಳ, ಠಾಣ್ಯದ ಗುರಿಕಾರರು, ಶಾನುಭೋಗ, ರೆಡ್ಡಿ, ಮೇಟಿ, ತಳವಾರ, ಮುಂತಾದ ವ್ಯವಸ್ಥೆ ಇರುತ್ತದೆ. ಇನಾಮು ನೀಡಿಕೆ, ಕಂದಾಯ ವಸೂಲಿ, ದಾನಾದಿಕಾರ್ಯಗಳು ಇತ್ಯಾದಿ ಆರ್ಥಿಕ ವ್ಯವಹಾರವೂ ಇರುತ್ತದೆ. ಇಂಥಹ ಪಾಳೆಯ ಪಟ್ಟುಗಳು ಸಣ್ಣ ಹಾಗೂ ದೊಡ್ಡ ವಿಭಾಗಗಳಾಗಿ ಕಾಣಿಸಿಕೊಳ್ಳಬಹುದು.[೩]

ಎಂ.ಎಸ್.ಪುಟ್ಟಣ್ಣನವರು ಪಾಳೆಯಗಾರ ಎಂಬ ಪದವನ್ನು "ಪಾಳೇಗಾರರೆಂಬ ಅಧಿಪತಿಗಳು ವಿಜಯನಗರದ ದೊರೆಗಳಿಗೆ ವಶವರ್ತಿಗಳಾಗಿ ಅವರಿಗೆ ಕಪ್ಪ ಮೊದಲಾದವುಗಳನ್ನೆಲ್ಲಾ ಕೊಡುತ್ತಾ ಯುದ್ಧ ಪ್ರಸಂಗ ಬಂದಾಗಲೂ ಇತರ ಕಾಲಗಳಲ್ಲಿಯೂ ಅವರ ಸಹಾಯಕ್ಕೆ ತಮ್ಮ ದಂಡನ್ನು ಕಳಿಸುತ್ತಿದ್ದರೆಂದು ಗೊತ್ತಾಗುತ್ತದೆ. ಇಂಥ ತಮ್ಮ ಸೇನೆಗಳೊಡನೆ ಈ ಮುಖಂಡರು ವಿಜಯನಗರದ ಮಹಾರಾಜರ ದರ್ಶನಕ್ಕೆ ಹೋಗಿ ರಾಜಧಾನಿಯ ಹೊರ ಭಾಗದಲ್ಲಿ ಇಳಿದುಕೊಂಡು ಗುನುಗು ಬಚಾರ ಸಮೇತವಾಗಿ ಪಾಳೆಯ ಹಾಕಿ ಇರುತ್ತಿದ್ದ ಕಾರಣ ಆಯಾ ಪ್ರಮುಖರಿಗೆ ಪಾಳೆಯಗಾರರೆಂಬ ಹೆಸರು ಬಂತೊ ಅಥವಾ ವಿಜಯನಗರದ ಸಂಸ್ಥಾನದ ದಂಡು ಶತೃಗಳ ಮೇಲೆ ಹೋದಾಗ ಈ ಪ್ರಭುಗಳು ತಮ್ಮ ದಂಡಿನೊಡನೆ ಅವರ ಸಹಾಯಕ್ಕೆ ಹೋಗಿ ಒಂದೊಂದು ಸ್ಥಳದಲ್ಲಿ ಇಳಿದುಕೊಳ್ಳುತ್ತಿದ್ದರೆಂದು ಅವರಿಗೆ ಪಾಳೆಯಗಾರರೆಂದು ಅಭಿದಾನವಾಯಿತೋ ಗೊತ್ತಾಗಿಲ್ಲ ಎಂದು ಅರ್ಥೈಸುತ್ತಾರೆ. ಒಂದೊಂದು ಚಿಕ್ಕ ಚಿಕ್ಕ ಪ್ರಾಂತ್ಯಗಳಲ್ಲಿ ಪ್ರಮುಖರಾಗಿ ದೊರೆಗಳಂತೆ ಆಳಿಕೊಂಡು ಜನರಿಂದ ಕಂದಾಯ ಕಾಣಿಕೆ ಮೊದಲಾದ ತೆರಿಗೆಗಳನ್ನು ತೆಗೆದುಕೊಳ್ಳುತ್ತಾ ದುಷ್ಟರನ್ನು ನಿಗ್ರಹಿಸುತ್ತಾ ಶಿಷ್ಟರನ್ನು ಕಾಪಾಡುತ್ತಾ ಇದ್ದ ಮುಖಂಡರನ್ನ ಪಾಳೆಯಗಾರರೆಂದು ಕರೆಯುತ್ತಿದ್ದರು.[೪] ನಾಯಕ ಆಡಳಿತವೆಂದರೆ ಸಾಮಾನ್ಯವಾಗಿ ಪಾಳೆಯ ಪಟ್ಟಿಗೆ ಸಂಬಂಧಿಸಿದ್ದೇ ಎಂಬ ಗ್ರಹಿಕೆ ಇದೆ. ಪಾಳೆಯ ಪಟ್ಟಿನ ಮುಖಂಡನೆ ಪಾಳೆಯಗಾರ. ಪಾಳೆಯ ಪಟ್ಟು ಅವನ ನೆಲೆವೀಡು; ಆದಾಗಿ ಅವನು ನಾಯಕ. ವಿಜಯನಗರೋತ್ತರ ಕಾಲದಲ್ಲಿ ನಾಯಕತನಕ್ಕಿದ್ದ ಮಹತ್ವ ಪೆಲವಾಗುತ್ತಾ ಬಂದು ಪಾಳೇಗಾರ ಶಬ್ದವು ಲಘುವಾಗಿ ಬಳಕೆಯಾಗ ತೊಡಗಿತು. ಇಂಥ ಸಂದರ್ಭದಲ್ಲಿ ವರ್ಗೀಕೃತ ನಾಯಕರೆನಿಸಿಕೊಂಡವರೆಲ್ಲ ಪ್ರಬಲವಾಗಿ ದೊರೆತನ ಮಾಡಿದವರೂ ಸಂಸ್ಥಾನ ಕಟ್ಟಿದವರೂ ಉಂಟು. ಈ ವ್ಯವಸ್ಥೆ ಹಿಂದಿನ ಅರಸು ಮನೆತನಗಳ ಕಾಲದಲ್ಲಿ ಅಸ್ತಿತ್ವದಲ್ಲಿತ್ತು. ವಿಜಯನಗರ ಕಾಲದ ಸಂಸ್ಕೃತಿ ಸಡಿಲಗೊಳ್ಳದೆ ಸ್ವತಂತ್ರಗೊಂಡ ಪಾಳೆಯ ಪಟ್ಟುಗಳಿಂದ ಮತ್ತೆ ವಿಜೃಂಭಿಸಿತು. ಈ ಪಾಳೆಯ ಪಟ್ಟುಗಳಿಂದ ಸಾಕಷ್ಟು ದೊರೆ ಮನೆತನಗಳು ಹುಟ್ಟಿಕೊಂಡವು. ಸಮರ್ಥ ಪಾಳೆಯಗಾರರ ನಾಯಕತ್ವದಲ್ಲಿ ಸ್ಥಳೀಯ ಆಡಳಿತವು ಸಮರ್ಪಕವಾಗಿ ಕಾರ್ಯ ನಿರ್ವಹಿಸಿತು. ವಿವಿಧ ರಂಗಗಳಲ್ಲಿ ಪ್ರಗತಿಯೂ ಕಂಡು ಬಂತು. ಸಂಸ್ಕೃತಿಯ ಪೋಷಣೆಯ ದೃಷ್ಟಿಯಿಂದ ಸ್ಥಳೀಯ ರಾಜಕೀಯ ಘಟಕಗಳ ಪಾತ್ರ ವಿಶಿಷ್ಟವಾದದ್ದು. ಮಹಾಸಾಮ್ರಾಜ್ಯವನ್ನಾಳಿದ ಚಕ್ರವರ್ತಿಗಳ ಆಸ್ಥಾನ ಪ್ರಧಾನವಾಗಿ ಶಿಷ್ಟ ಸಂಸ್ಕೃತಿಯ ಪರಂಪರೆಯ ಪೋಷಣೆ ಮತ್ತು ರಕ್ಷಣೆಯನ್ನು ಹೊತ್ತರೆ, ಸ್ಥಳೀಯ ಪಾಳೆಯಗಾರರು ಪ್ರಧಾನವಾಗಿ ಶಿಷ್ಟ ಸಂಪ್ರದಾಯವನ್ನು ಬಿಡದೇ ಜನಪದ ಬದುಕಿಗೆ ಹತ್ತಿರವಾದ

ಸಂಸ್ಕೃತಿಯನ್ನು ಪೋಷಿಸಿ ಬೆಳೆಸಿದರು. ಇದರಿಂದ ಸಾಮಾನ್ಯ ಜನರ ಸಂಘಟನೆ ಅವರಿಗೆ ಸಾಧ್ಯವಾಯಿತಲ್ಲದೆ, ಅನೇಕ ಜನಪದ ಸಂಸ್ಕೃತಿಯ ಪ್ರಕಾರಗಳು ಉಳಿದು ಬರುವುದಕ್ಕೆ ಸ್ವಲ್ಪ ಮಟ್ಟಿಗೆ ಇವರಿಂದ ಪ್ರೋತ್ಸಾಹ ಸಿಕ್ಕಿತು. ಸ್ವಧರ್ಮ ಶಿಕ್ಷಣಾ ಕಾರ್ಯದಲ್ಲಿ ಪಾಳೆಯಗಾರರ ಪಾತ್ರ ಹಿರಿದಾದುದೆಂದು ಹೇಳಬಹುದು. ಇದರಿಂದ ಕಣಕುಪ್ಪೆಯ ಪಾಳೆಯಗಾರರು ಹೊರತಾಗಿಲ್ಲ. ಈ ಪಾಳೆಯಗಾರರು ಸ್ಥಳೀಯವಾಗಿ ಅಸ್ತಿತ್ವಕ್ಕೆ ಬಂದು ಪರಿಣಾಮಕಾರಿ ಆಡಳಿತವನ್ನು ಒದಗಿಸಿರು. ಈ ಅಂಶವನ್ನು ಅನೇಕ ಶಾಸನಗಳು, ಕೃಥಿಯತ್ತು ಮತ್ತು ಸ್ಮಾರಕಗಳು, ಬೆಳಕು ಚೆಲ್ಲುತ್ತವೆ. ಈ ಪರಿಸರದ ವ್ಯಾಪ್ತಿಯಲ್ಲಿ ಬರುವ ಕಣಕುಪ್ಪೆ ಪಾಳೆಗಾರರು ಹೊಂದಿದ ನಿಯಂತ್ರಣ ಮತ್ತು ಅಧಿಕಾರ, ಅವರ ಕಾರ್ಯಗಳನ್ನು ಇಲ್ಲಿ ಚರ್ಚಿಸಲಾಗಿದೆ.

## ಚಿತ್ರದುರ್ಗದ ಕೋಟೆಯಲ್ಲಿ ರಾಜಕೀಯ ಅನೈಕ್ಯತೆ

ಕ್ರಿ.ಶ. ೧೭೭೫ರ ಸಂದರ್ಭದಲ್ಲಿ ಚಿತ್ರದುರ್ಗದಲ್ಲಿ ತಿಮ್ಮಣ್ಣ ನಾಯಕನ[೫] ತರುವಾಯ ಇಮ್ಮಡಿ ಮದಕರಿ ನಾಯಕನ ಸಾಕು ಮಗ ಓಬಣ್ಣ ನಾಯಕನಿಗೆ ಓಬಳ ದೇವರ ಗುಡಿಯಲ್ಲಿ ಪಟ್ಟಕಟ್ಟಿದರು.[೬] ಗಡ್ಡದ ಮದಕರಿ ನಾಯಕನನ್ನು ಇಮ್ಮಡಿ ಮದಕರಿ ನಾಯಕ ಎಂದು ಕರೆಯುವುದು ರೂಢಿ ಇತ್ತು.[೭] ಇವರ ಮಕ್ಕಳು ಚಿಕ್ಕಣ್ಣ ನಾಯಕ ಮತ್ತು ಚಿಕ್ಕ ಮದಕರಿ ನಾಯಕರು. ಓಬಣ್ಣ ನಾಯಕನು ಶಕ್ತಿವಂತ ಆದರೆ ದುರಾಚಾರಿ, ಪ್ರಬಲ ಪೀಡಕನಾಗಿದ್ದನು, ಅದರಲ್ಲೇ ತೃಪ್ತಿ ಪಡುತ್ತಿದ್ದನು. ಇವನು ಪಟ್ಟಕ್ಕೆ ಬಂದಾಗ ಪದ್ಧತಿಯ ಪ್ರಕಾರ ಗುರಿಕಾರರಿಗೆ ದಳವಾಯಿಗಳಿಗೆ ಒಂದು ತಿಂಗಳ ಸಂಬಳವನ್ನು ಇನಾಮಾಗಿ ಕೊಡಬೇಕಾಗಿತ್ತು.[೮] ಆದರೆ ಅವನು ಕೊಡಲಿಲ್ಲ. ಇದಕ್ಕೂ ಮುನ್ನ ಚಿತ್ರದುರ್ಗದ ಕೋಟೆಗೆ ಕಸ್ತೂರಿ ರಂಗಪ್ಪನ ತರುವಾಯ ಜೇಷ್ಠ ಸಂತತಿಗೆ ಸೇರಿದ ಮೊಮ್ಮಗನಾದ ಲಿಂಗಣ್ಣನಿಗೆ ಪಟ್ಟವಾಗಬೇಕಿತ್ತು. ಇದು ತಪ್ಪಿ ಹೋಗಿ ಕಸ್ತೂರಿ ರಂಗಪ್ಪನ ಮೂರನೇ ಮಗನಾದ ಇಮ್ಮಡಿ ಮದಕರಿ ನಾಯಕನಿಗೆ ಪಟ್ಟಕಟ್ಟಿದ್ದರು. ಈ ಅನ್ಯಾಯವು ಜನರ ಮನಸ್ಸಿನಲ್ಲಿ ಸೇನಾಪತಿಗಳ ಮನಸ್ಸಿನಲ್ಲಿತ್ತು, ಇಮ್ಮಡಿ ನಾಯಕನಿಗೆ ಮಕ್ಕಳಿರಲಿಲ್ಲ. ಆಗಲೂ ಸರ್ಜೆರಾಯನ ಮಕ್ಕಳನ್ನು ಬಿಟ್ಟು ಇಮ್ಮಡಿ ಮದಕರಿ ನಾಯಕನಿಗೆ ಒಬ್ಬ ಸಾಕು ಮಗನನ್ನು ಕಲ್ಪನೆ ಮಾಡಿ ಅವನಿಗೆ ಪಟ್ಟ ಕಟ್ಟಿದರು. ಇದು ಜನರ ಅಸಮಾಧಾನ ಹೆಚ್ಚಾಗುವುದಕ್ಕೆ ಕಾರಣವಾಯಿತು. ಇದೆಲ್ಲಾ ಕಾರಣದಿಂದ ಇನಾಮು ಕೊಡಲಿಲ್ಲವೆಂಬ ತಾತ್ಕಾಲಿಕ ಆಕ್ರೋಶವು ಹೆಚ್ಚಾಗಿ ದಳವಾಯಿಗಳು ಬಣ್ಣ ನಾಯಕನನ್ನು ಚಿಕ್ಕ ಬಾಗಿಲ ಬಳಿ ಕೊಂದು ಹಾಕಿದರು.[೯] ನಂತರ ಅವನ ಮಗ ಶೂರಕಾಂತನನ್ನು ಗದ್ದುಗೆಗೆ ಏರಿಸಿದರು.[೧೦] ಇವನು ನೀತಿವಂತ ಆದರೆ ಬುದ್ಧಿವಂತನಾಗಿರಲಿಲ್ಲ. ಪ್ರತಿ ಪಾಳೇಗಾರ ಗದ್ದುಗೆಯನ್ನೇರಿದಾಗ ಸೈನಿಕರಿಗೆ ಬಹುಮಾನ ಹಂಚುವ ಪದ್ಧತಿ ಇವನಿಗೆ ಹಿಡಿಸಲಿಲ್ಲ. ದಳವಾಯಿಗಳು ನಾನಾ ವಿಧವಾಗಿ ಒಪ್ಪಿಸಲು ಪ್ರಯತ್ನಿಸಿದರು. ಆದರೆ ಅವನು ಕೇಳಲಿಲ್ಲ. ದಳವಾಯಿಗಳು ಅಸಮಾಧಾನಗೊಂಡು ಅವನನ್ನ ಕೊಂದು ಹಾಕಿದರು. ಇಂತಹ ಸಂದರ್ಭದಲ್ಲಿ ಚಿತ್ರದುರ್ಗದ ಕೋಟೆಯಲ್ಲಿ ರಾಜಕೀಯ ಅನೈಕ್ಯತೆ ಉಂಟಾಯಿತು. ಓಬಣ್ಣನಾಯಕನ ಕೊಲೆ ಆದಾಗ ಚಿಕ್ಕಣ್ಣನಾಯಕ ತಂದೆ ಕೋಮಾರಪ್ಪ ನಾಯಕರು ಹರಪನಹಳ್ಳಿಗೆ ಓಡಿಹೋಗಿ ಅಲ್ಲಿಂದ

ಬಂದು ಕಣಕುಪ್ಪೆಯಲ್ಲಿ ನೆಲೆಸಿದ್ದರು. ನ್ಯಾಯಯುತವಾಗಿ ಸಿಂಹಾಸನಕ್ಕೆ ಹಕ್ಕುದಾರನಾಗಿದ್ದ ಚಿಕ್ಕಣ್ಣನನ್ನು ಕರೆತರಲು ದಳವಾಯಿ ದೇಸಣ್ಣ ಮತ್ತು ರಂಗಪ್ಪ ಇವರಿಬ್ಬರೂ ಹೋಗಿ ಬಿಳಿಚೋಡಿನಲ್ಲಿ ಇಳಿದುಕೊಂಡು ಕಣಕುಪ್ಪೆಯಿಂದ ಚಿಕ್ಕಣ್ಣನಾಯಕನನ್ನು ಕರೆಸಿಕೊಂಡು ಅವನಿಗೆ ಭರವಸೆ ಕೊಟ್ಟು ಚಿತ್ರದುರ್ಗಕ್ಕೆ ಕರೆದುಕೊಂಡು ಹೋಗಿ ಕ್ರಿ.ಶ. ೧೬೭೫ರಲ್ಲಿ ಸಿದ್ಧೇಶ್ವರನ ದೇವಸ್ಥಾನದಲ್ಲಿ ಪಟ್ಟಾಭಿಷೇಕ ಮಾಡಿದರು.[೧೧]

### ಚಿಕ್ಕಣ್ಣನಾಯಕ

ಚಿಕ್ಕಣನಾಯಕ ಕ್ರಿ.ಶ. ೧೬೭೫ ರಿಂದ ೧೬೮೬ರವರೆಗೆ ಆಳ್ವಿಕೆ ಮಾಡಿದ. ಇವನ ಕಾಲ ಧಾರ್ಮಿಕವಾಗಿ, ರಾಜಕೀಯವಾಗಿ, ಸಾಂಸ್ಕೃತಿಕವಾಗಿ ಪ್ರಮುಖವಾದ ಕಾಲಘಟ್ಟವಾಗಿತ್ತು. ಇವನ ಕಾಲದಲ್ಲಿ ಹಲವಾರು ಯುದ್ಧಗಳು ಜರುಗಿದವು. ದೇವಾಲಯಗಳು, ಕೋಟೆಗಳು ನಿರ್ಮಾಣವಾದವು. ಕೋಟೆಗಳು ಎಂದರೆ ಉಚ್ಚಂಗಿ ದುರ್ಗದ ಕೋಟೆ,[೧೨] ಕಣಕುಪ್ಪೆ ಕೋಟೆ,[೧೩] ಹೊಸದುರ್ಗದ ಕೋಟೆ,[೧೪] ಚಿತ್ರದುರ್ಗದ ಮೇಲು ದುರ್ಗದಲ್ಲಿ ವಿನಾಯಕನ ಗುಡಿ, ಹೊಂಡ, ಹೊರಕೆರೆ ದೇವರಪುರದ ಸುತ್ತ ಉಯ್ಯಾಲೇ ಕಂಬಗಳನ್ನು ನಿರ್ಮಿಸಿದ. ಈತನ ಪಾರುಪತ್ಯಗಾರರು ಜಿಲ್ಲೆಯ ವಿವಿಧ ಕಡೆ ಅನೇಕ ಗುಡಿಗೋಪುರಗಳನ್ನು ಕಟ್ಟಿಸಿದರು.

### ಯುದ್ಧಗಳು

ಕ್ರಿ.ಶ. ೧೬೭೬ರ ಸಂದರ್ಭದಲ್ಲಿ ಹರಪನಹಳ್ಳಿಯ ಪಾಳೆಯಗಾರರು ಅಣಜಿ ಕೋಟೆಯನ್ನು ಮುತ್ತಿ, ಅಲ್ಲಿನ ಅಧಿಕಾರಿಯಾಗಿದ್ದ ಭೂನಪ್ಪನನ್ನು ಕೊಂದುಹಾಕಿದರು.[೧೫] ಈ ಸಮಾಚಾರವನ್ನು ಕೇಳಿದ ಚಿಕ್ಕಣ್ಣನಾಯಕ ಸಾಣೇಕೆರೆಯಿಂದ ಅಣಜಿಗೆ ಹೋದನು. ಅಲ್ಲಿದ್ದ ಕೆಂಚನ ಗೌಡನ ಜೊತೆಗೂಡಿ ಹರಪನಹಳ್ಳಿಯವರನ್ನು ಓಡಿಸಿದರು. ಆಗ ಅವರ ಸಾಹಸಕ್ಕೆ ಮೆಚ್ಚಿ ಅಣಜಿಯಲ್ಲಿದ್ದ ಸೈನಿಕರಿಗೆ ಹೊಲವನ್ನು, ಉಡುಗೊರೆಯನ್ನು ದಾನ ಮಾಡಿ ಬಂದನು. ಕ್ರಿ.ಶ. ೧೬೭೭ರಲ್ಲಿ ಷಂಕ್ಷೇರ್‌ಖಾನನ ಸೈನ್ಯ ಹರಿಪರ ಕೋಟೆಯನ್ನು ಮುತ್ತುವುದು ಎಂದು ಅಲ್ಲಿನ ಸುಬೇದಾರ್ ಷೇರ್‌ಖಾನ್‌ನ ಮೂಲಕ ಚಿಕ್ಕಣ್ಣ ನಾಯಕನಿಗೆ ತಿಳಿಯಿತು.[೧೬] ಅಷ್ಟರಲ್ಲಿ ಷಂಷೇರ್‌ಖಾನ್‌ನು ಆರು ಸಾವಿರ ಕುದುರೆ, ಹನ್ನೆರಡು ಸಾವಿರ ಕಾಲಾಳುಗಳೊಂದಿಗೆ ಹರಿಹರವನ್ನು ಮುತ್ತಿದನು. ಆಗ ಚಿಕ್ಕಣ್ಣ ನಾಯಕನು ಬಾರೆಗುಡ್ಡದ ಬಳಿ ರಾತ್ರಿ ಬಂದಿಳಿದು, ಅಲ್ಲಿನ ಮರಗಳಿಗೆ ಹಾಗೂ ಎತ್ತುಗಳ ಕೊಂಬುಗಳಿಗೆ ಪಂಜುಗಳನ್ನು ಹಾಗೂ ದೀವಟಿಗೆಗಳನ್ನು ಹಚ್ಚಿ ನಗಾರಿ ಮತ್ತು ರಣವಾದ್ಯಗಳನ್ನು ಏಕಕಾಲದಲ್ಲಿ ಮೊಳಗಿಸಿ, ಅದರೊಟ್ಟಿಗೆ ನೂರಾರು ಬಾಣಗಳಿಗೆ ಬೆಂಕಿ ಹಚ್ಚಿ ಪ್ರಯೋಗಿಸಿದ. ಇದೆಲ್ಲಾ ಸೈನ್ಯ ಎಂದು ತಿಳಿದು ಷಂಷೇರ್‌ಖಾನನು ದಿಕ್ಕೆಟ್ಟು ಪರಾರಿ ಆದನು.

ಕ್ರಿ.ಶ. ೧೬೭೮ರಲ್ಲಿ ಚಿಕ್ಕಣ್ಣನಾಯಕನು ರಾಯದುರ್ಗವನ್ನು ಮುತ್ತಿಗೆ ಹಾಕಿದನು. ಅಲ್ಲಿನ ದೊರೆ ಬುಟುಗಲು ಬೊಮ್ಮಣ್ಣನಾಯಕನು ಊರಬಾಗಿಲ ಬೀಗದ ಕೈಯನ್ನು ರಾಜ ಮುದ್ರೆಯನ್ನು ತಂದು ನಾಯಕನಿಗೆ ಒಪ್ಪಿಸಿ ಶರಣಾದನು. ಆಗ ಅವನನ್ನು ಚಿತ್ರದುರ್ಗಕ್ಕೆ ಕರೆದುಕೊಂಡು ಹೋಗಿ ತಮ್ಮ ಮಗಳನ್ನು ವಿವಾಹ ಮಾಡಿಸಿ ರಾಯದುರ್ಗಕ್ಕೆ ವಾಪಾಸು ಕಳುಹಿಸಿದರು.

## ಚಂದ್ರಾಯುಧಕ್ಕೆ ಮದುವೆ

ಕ್ರಿ.ಶ. ೧೬೭೯ರಲ್ಲಿ ತರೀಕೆರೆ ಪಾಳೆಯಗಾರರು ತಮ್ಮ ಮನೆಯ ಹೆಣ್ಣು ಮಗಳಾದ ಹನುಮವ್ವಳನ್ನು ಚಿಕ್ಕಣ್ಣನಾಯಕನಿಗೆ ಮದುವೆ ಮಾಡಿ ಕೊಡುತ್ತೇವೆಂದು, ಬಿದನೂರು ಚೆನ್ನಮ್ಮಾಜಿ ಮತ್ತು ಶಬನಿ ಕೃಷ್ಣಪ್ಪ ಇವರ ಮಧ್ಯಸ್ಥಿಕೆ ಮೂಲಕ ಹೇಳಿಕಳುಹಿಸಿದರು. ಆಗ ದುರ್ಗದ ದೊರೆ ತನ್ನ ಪಟ್ಟದ ಆಯುಧವಾದ ಚಂದ್ರಾಯುಧವನ್ನು ಕಳುಹಿಸಿದ. ಆಗ ತರೀಕೆರೆ ಪಾಳೇಗಾಯರರು ತಮಗೆ ಅಪಮಾನವಾಯಿತೆಂದು ಶಕನವ್ವ ಎಂಬ ಬೇರೊಬ್ಬ ಹೆಣ್ಣುಮಗಳನ್ನು ಆ ಚಂದ್ರಾಯುಧಕ್ಕೆ ಮದುವೆ ಮಾಡಿವರು.[೧೭] ಅದಕ್ಕೆ ಸಿಟ್ಟಿಗೆದ್ದ ಚಿಕ್ಕಣ್ಣ ನಾಯಕ ತರೀಕೆರೆ ಪಾಳೇಯಗಾರರ ಮೇಲೆ ದಂಡೆತ್ತಿ, ಯುಗಟಿ, ಲಲ್ಲಂಬಳಸ, ಬೌಳ ಹಿರಿಯೂರು ಗಡಿಗಳನ್ನು ವಶಪಡಿಸಿಕೊಂಡು ತರೀಕೆರೆ ಮೇಲೆ ಎರಗಲು ಸಿದ್ಧನಾದನು. ಆಗ ಹನುಮವ್ವಳನ್ನು ವಿವಾಹ ಮಾಡಿಕೊಡುವುದಾಗಿ ಒಡಂಬಡಿಕೆ ಮಾಡಿಕೊಂಡರು. ಚಿಕ್ಕಣ್ಣ ನಾಯಕನು ತರೀಕೆರೆಗೆ ಹೋಗಿ ಒಂದು ಲಕ್ಷ ವರಹ ಖರ್ಚು ಮಾಡಿ ಹನುಮವ್ವಳನ್ನ ಮದುವೆ ಆದನು.

## ದಾನಗಳು

ಕ್ರಿ.ಶ. ೧೬೭೭ರಲ್ಲಿ ಚಿಕ್ಕಣ್ಣನಾಯಕರು ತಮ್ಮ ತಂದೆಗೆ ಪುಣ್ಯ ಬರಲೆಂದು ತೊರೆಸಾಲ್ ನಾಗೇನಹಳ್ಳಿ ಗ್ರಾಮವನ್ನು ತಿರುಪತಿ ಪದ್ದರಾಮಾಂಜಯ್ಯನವರಿಗೆ ಅಗ್ರಹಾರವನ್ನಾಗಿ ದಾನ ಮಾಡಿದ್ದಾರೆ.[೧೮]

ಕ್ರಿ.ಶ. ೧೬೭೮ರಲ್ಲಿ ಶೃಂಗೇರಿ ಮಠದ ಶಂಕರ ಭಾರತೀ ಸ್ವಾಮಿಗಳ ಕೃಪೆಯಿಟ್ಟು ಉಡುಗೊರೆ, ವಿಭೂತಿ, ಪ್ರಸಾದವನ್ನು ಅರಸ ಚಿಕ್ಕಣ್ಣನಾಯಕರಿಗೆ ಕಳುಹಿಸಿದರು. ಅದನ್ನು ತೆಗೆದುಕೊಂಡು ಶ್ರೀ ಸದ್ಗುರುಗಳ ಮಠಕ್ಕೆ ಬಾಗೂರು ಸೀಮೆ, ಮಾರಗಟ್ಟ ಎಂಬ ಗ್ರಾಮವನ್ನು ದಾನಪತ್ರ ಬರೆಸಿ, ಉಡುಗೊರೆ ಸಹಿತ ಬ್ರಹ್ಮ ಭಟ್ಟರ ಮೂಲಕ ಗುರುಗಳ ಸನ್ನಿಧಾನಕ್ಕೆ ಕಳುಹಿಸಿದ್ದಾರೆ.[೧೯]

ಬಾಗೂರು ಗ್ರಾಮದ ಶ್ರೀ ಚನ್ನಿಗರಾಯಸ್ವಾಮಿಗೆ ತೇರು ಮತ್ತು ಚಿನ್ನದ ಮುಲಾಮಿನ ಗರುಡೋತ್ಸವದ ವಾಹನವನ್ನು ಮಾಡಿಸಿ ದಾನಕೊಟ್ಟು ಬಾಗೂರು ಕೋಟೆಯನ್ನು ಸಹ ಕಟ್ಟಿಸಿದ್ದಾರೆ.[೨೦]

ಕ್ರಿ.ಶ. ೧೬೮೩ರಲ್ಲಿ ಬಾಗೂರು ಚನ್ನಬಸವ ದೇವರ ಮಕ್ಕಳು ರುದ್ರಪ್ಪ ದೇವರಿಗೆ ಬಾಗೂರು ಸೀಮೆಗೆ ಸೇರಿದ ವಿರಾಪುರ ಗ್ರಾಮವನ್ನು ದಾನವಾಗಿ ಕೊಟ್ಟು ದಾನಶಾಸನ ಬರೆಸಿದ್ದಾರೆ.[೨೧]

## ಕೋಮಾರಪ್ಪ ನಾಯಕ

ಚಿಕ್ಕಣ್ಣನಾಯಕರು ಚಿತ್ರದುರ್ಗದಲ್ಲಿ ಪಟ್ಟವೇರಿದಾಗ ಕಣಕುಪ್ಪೆಯನ್ನು ನೋಡಿಕೊಳ್ಳಲು ತಂದೆ ಕೋಮಾರಪ್ಪ ನಾಯಕನನ್ನು ನೇಮಿಸಿದ.[೨೨] ಕಣಕುಪ್ಪೆ ಗುಡ್ಡದ ಮೇಲೆ ಜರೀಮಲೆ ಬೇಡರು ಸೇರಿಕೊಂಡು ಸುತ್ತ ಮುತ್ತಲ ಗ್ರಾಮಗಳಲ್ಲಿ ಕಳ್ಳತನ ಮಾಡುತ್ತಾ ತೊಂದರೆ ಕೊಡುತ್ತಿದ್ದರು. ಆಗ ಕೋಮಾರಪ್ಪ ನಾಯಕರು ಅವರನ್ನು ಗುಡ್ಡಗಳಿಂದ ಓಡಿಸಿದರು. ಆ ಗುಡ್ಡದಲ್ಲಿದ ಗವಿಗಳು, ಹೊಂಡಗಳು, ವಿಸ್ತಾರವಾದ ಪ್ರದೇಶವನ್ನು ನೋಡಿ ಇಲ್ಲೊಂದು ಕೋಟೆ ಕಟ್ಟಬೇಕು ಎಂದು ಚಿಕ್ಕಣ್ಣನಾಯಕರ ಬಳಿ

ಹೇಳಿದರು. ಅವರ ಒಪ್ಪಿಗೆಯ ಮೇರೆಗೆ ಕಾಮಾಟಿಗರ ಓಬಣ್ಣನ ಜೊತೆಗೆ ಸ್ವಲ್ಪ ಆಳುಗಳನ್ನು ಕಳುಹಿಸಿ, ಅಲ್ಲಿನ ಗಿಡ ಮರಗಳನ್ನು ಕಡಿಯಲು ಹಚ್ಚಿದರು. ಗಿಡಮರಗಳನ್ನು ಕಡಿದ ಮೇಲೆ ಕೋಟೆಯನ್ನು ಕಟ್ಟಲು ತರಹಾಕಿ ಮೊದಲ ಹಂತವಾಗಿ ಕೆಳಗಣ ಕೋಟೆಯನ್ನು ಪೂರ್ಣಗೊಳಿಸಿದರು.

ನಂತರ ಮೇಲುದುರ್ಗದ ಸುತ್ತ ಹೊಂಡಕಟ್ಟಿಸಿ, ಕೋಮಾರಪ್ಪರು ಇರಲಿಕ್ಕೆ ಒಂದು ಮನೆಯನ್ನು ಕಟ್ಟಿಸಿ, ಕಾಮಾಟಿಗರಿಗೆ ಉಡುಗೊರೆ ಕೊಟ್ಟು, ಊಟ ಮಾಡಿಸಿ, ಹತ್ತು ಕುರಿಗಳನ್ನು ಕಡಿದು ಸುತ್ತಲೂ ಚರಗ ಚೆಲ್ಲಿ ಮನೆಗೆ ಪ್ರವೇಶ ಮಾಡಿದರು.

ಗುಡ್ಡದ ಪೂರ್ವದಿಕ್ಕಿನ ಕಡೆ ಬೇಲಿ ಹಾಕಿದ್ದರು. ಅಲ್ಲಿಗೆ ಕಳ್ಳರು ಬೆಂಕಿ ಹಚ್ಚಿ ತೊಂದರೆ ಕೊಡುತ್ತಿದ್ದರು. ಆಗ ಕೋಮಾರಪ್ಪರು ಬೇಲಿ ತೆಗೆಸಿ ಒಂದು ಬುರುಜು ಕಟ್ಟಿ, ಸುತ್ತಲೂ ಕೋಟೆ ಕಟ್ಟಿಸಿದರು. ಅಲ್ಲಿನ ಹೊಂಡದ ಮಣ್ಣು ತೆಗೆಯುವಾಗ ಒಂದು ದೊಡ್ಡ ಶಂಖ ಸಿಕ್ಕಿತು. ಆಗ ಕಾಮಾಟಿಗನು ಅದನ್ನು ಕೋಮಾರಪ್ಪನ ಬಳಿ ತಂದು ಕೊಟ್ಟಾಗ ಅವನಿಗೆ ಉಡುಗೊರೆ ಕೊಟ್ಟು ಸಂಬಳ ಹೆಚ್ಚಿಗೆ ಮಾಡಿದ. ಚಿತ್ರದುರ್ಗದಿಂದ ತಿಮ್ಮಪ್ಪ ಜೋಯಿಸರನ್ನು ಕರೆಯಿಸಿ ಶಂಖ ತೋರಿಸಿದಾಗ ಅವರು, ಆ ಶಂಖವನ್ನು ಹಾಗೂ ಅದು ಇದ್ದ ಸ್ಥಳವನ್ನು ನೋಡಿ, "ಇದು ಹಿಂದೆ ಕಣ್ವಋಷಿಗಳ ಆಶ್ರಮ ಆಗಿತ್ತು. ಈ ಶಂಖ ಅವರದೆ" ಎಂದು ಹೇಳಿದರು. ಆಗ ಆ ಗುಡ್ಡಕ್ಕೆ ಕಣ್ವಕುಪ್ಪೆ ಎಂದು ಹೆಸರಿಟ್ಟರು.[೨೧] ಆಗ ಸುತ್ತಲಿನ ಮೂರು ಗುಡ್ಡಗಳಿಗೆ ಮೇಲುದುರ್ಗ, ಮನ್ನಲಗಟ್ಟು, ಕೊತ್ತಲಗಟ್ಟು ಎಂಬ ಹೆಸರಿಟ್ಟು ಗುಡ್ಡಗಳ ಸುತ್ತ ಇದ್ದ ಗಿಡ ಮರಗಳನ್ನು ಕಡಿಸಿ ಹೊಂಡ ತೆಗೆಸಿ, ಕೋಟೆ ಕಾವಲಿಗೆ ೪೦೦ ಜನ ಆಗಬೇಕು ಎಂದು ಬೊಮ್ಮಯ್ಯನಿಗೆ ತಿಳಿಸಿದರು. ಆಗ ಬೊಮ್ಮಯ್ಯನು ಸುತ್ತ ಹಳ್ಳಿಗಳಿಗೆ ಹೇಳಿ ಕಳುಹಿಸಿದ. ಹುಚ್ಚಯ್ಯನ ನೇತೃತ್ವದಲ್ಲಿ ಇಪ್ಪತ್ತು ಮಂದಿ ನೇಮಿಸಿ ಕೆಳಗಣ ಕೋಟೆಯನ್ನು ಕಟ್ಟಲು ತರ ಹಾಕಿದರು. ಆಗ ಕುರಿ, ಕೋಣ, ಅಕ್ಕಿ, ತುಪ್ಪ, ತರಿಸಿ, ಕೋಟೆಯ ಸುತ್ತಲೂ ಚರಗಾ ಚೆಲ್ಲಿದರು.

**ಕಾಟನಾಯಕ**

ಚಿತ್ರದುರ್ಗದಲ್ಲಿ ಭರಮಪ್ಪನಾಯಕ ಆಳ್ವಿಕೆ ಮಾಡುತ್ತಿದ್ದಾಗ ಕಣಕುಪ್ಪೆಗೆ ನಾಯಕನನ್ನಾಗಿ ಮಾಡಿ ಕಾಟನಾಯಕನನ್ನು ಕಳುಹಿಸಿದರು. ಕಾಟನಾಯಕನು ಕಣಕುಪ್ಪೆಗೆ ಬಂದು ಕಾಟಮದೇವರಿಗೆ ಒಂದು ಮನೆ, ದೊರೆಗೆ ಇರಲು ಒಂದು ಮನೆ, ಎರಡು ಮನೆಗಳನ್ನು ಕಟ್ಟಲು ಪ್ರಾರಂಭಿಸಿದ. ಅರಮನೆಯ ಬಾಗಿಲು ಮರದ್ದಾಗಿದ್ದ ಕಾರಣ ಅದರ ಮುಂದೆ ಒಂದು ಹೊಂಡ ತೋಡಿಸಿದ. ಕೋಟೆಯ ಮೂಡಗಡಿಗೆ ಒಂದು ಕಲ್ಲುಬಾಗಿಲನ್ನು ಹಾಕಿಸಿ ಅರಮನೆಯ ಮುಂದೆ ಒಂದು ಚಾವಡಿಯನ್ನು ಕಟ್ಟಿಸಿದನು. ಕಾಟಮದೇವರು ಮತ್ತು ಉಚ್ಚಂಗಿ ದೇವರ ಉತ್ಸವ ಮಾಡಲು ದುರ್ಗದ ದೊರೆ ಹಾಗೂ ಕೋಮಾರಪ್ಪ ಕಣಕುಪ್ಪೆಗೆ ಬಂದರು. ಕಾಟಮಲಿಂಗ ದೇವರು ಕಣಕುಪ್ಪೆಯಲ್ಲಿತ್ತು. ಉಚ್ಚಂಗಿ ದೇವರು ಉಚ್ಚಂಗಿ ದುರ್ಗದಲ್ಲಿದ್ದ ಕಾರಣ ಅದನ್ನು ಬಿಳಿಚೋಡ ಮಾರ್ಗವಾಗಿ ಬಂದು ಆಲದ ಮರದ ಬಳಿ ಎದುರುಗೊಂಡು

ಚಿತ್ರದುರ್ಗದಿಂದ ಸಿಡಿ ಕಂಭವನ್ನು ತರಿಸಿ ಸಿಡಿ ಆಚರಿಸಿ, ಬೇವಿನಸೀರೆ ಉಟ್ಟು, ಗಂಗಾಪೂಜೆ ಮಾಡಿಸಿ ಉತ್ಸವವನ್ನು ಆಚರಿಸಿದರು. ಈ ಸಂದರ್ಭದಲ್ಲಿ ಕಾಟನಾಯಕನು ದೊರೆಗಳ ಹತ್ತಿರ ಗಾರೆಬಾಗಿಲ ಬಳಿ ಒಂದು ಹೊಂಡ ತೆಗೆಸಬೇಕು ಹಾಗೂ ಕೋಟೆ ಕೆಳಗೆ ಒಂದು ಪೇಟೆ ಕಟ್ಟಿಸಬೇಕು ಎಂದು ಕೇಳಿದರು. ಆಗ ದೊರೆಗಳು ಒಪ್ಪಿಗೆ ಕೊಟ್ಟರು. ಪೇಟೆ ಮನೆಗಳನ್ನು ಹಾಗೂ ಹೊಂಡ ತೆಗೆಸಿದ ಮೇಲೆ ಪೇಟೆಯಲ್ಲಿ ಸೆಟ್ಟಿತನಕ್ಕೆ ವ್ಯಾಪಾರ ಗುರ್ರಪ್ಪ ಎನ್ನುವವನಿಗೆ ಅವನೆ ಸೂಕ್ತ ಎಂದು ಅನುಮತಿ ಕೊಟ್ಟನು. ಕಾಟನಾಯಕರ ಕಾಲದಲ್ಲಿ ದೇವಾಲಯಗಳ ಜೊತೆಗೆ ಕಾಟನಾಯಕನ ಕೆರೆ, ತಂದೆಯ ಹೆಸರಿನಲ್ಲಿ ಜಯಣ್ಣನಾಯಕನ[೨೬] ಕೆರೆಗಳನ್ನು ನಿರ್ಮಿಸಿ ಸ್ವರ್ಗಸ್ಥರಾದರು.

**ಜಯಣ್ಣ ನಾಯಕ - ಚಿಕ್ಕಭರಮಪ್ಪ ನಾಯಕ**

ಕಾಟನಾಯಕನ ತರುವಾಯ ಮಗ ಜಂಪಣ್ಣ ನಾಯಕನಿಗೆ ನಾಯಕತನ ಕೊಟ್ಟರು. ಈತನು ಓಬನ ಕೆರೆ ಕಟ್ಟಿಸಿ ತೋಪುಹಾಕಿಸಿದ. ಹೆಚ್ಚಿನ ವಿವರಗಳ ಇಲ್ಲ. ಕ್ರಿ.ಶ. ೧೬೬೧ರಲ್ಲಿ ಚಿಕ್ಕ ಭರಮಪ್ಪನಾಯಕನಿಗೆ ಪಟ್ಟಕಟ್ಟಿ ದುರ್ಗದಿಂದ ಕಳುಹಿಸಿಕೊಟ್ಟರು. ಇವನಿಗೆ ಮೂರು ಸಾವಿರ ಮಂದಿ ಕಾಲಾಳು ನೂರು ಕುದುರೆ, ಆನೆ, ನಿಶಾನಿ, ನಗಾರಿಗಳನ್ನು ಕೊಟ್ಟು ಕಳುಹಿಸಿದರು. ಈತನಿಗೆ ಕಿವಿ ಕಿವುಡು ಬಿದ್ದ ಕಾರಣ ದೊರೆತನಕ್ಕೆ ಸಲ್ಲದು ಎಂದು ಹೊಸದುರ್ಗಕ್ಕೆ ನಾಯಕತನಕ್ಕೆ ಹಾಕಿದರು.

**ಕಿರಿಯ ಜಂಪಣ್ಣನಾಯಕ**

ಚಿತ್ರದುರ್ಗ ಸಂಸ್ಥಾನವನ್ನು ಆಳಿದ ರಾಜಮನೆತಗಳಲ್ಲಿ ಜಂಪಣ್ಣ ನಾಯಕ ಹೆಸರಿನ ಅರಸರು ೪ ಜನರಿದ್ದಾರೆ.[೨೭] ಇವರಲ್ಲಿ ಸಮರ್ಥ ನಾಯಕ, ಜನಪದರ ಹಾಡುಗಳಲ್ಲಿ ಜೀವಂತವಾಗಿರುವವನು ಕಿರಿಯ ಜಂಪಣ್ಣನಾಯಕ. ಚಿನ್ನಹಗರಿ ನದಿ ಪರಿಸರಗಳ ಕೋಲುಪದಗಳಲ್ಲಿ ಈತನನ್ನು ಗುಣಗಾನ ಮಾಡಲಾಗಿದೆ.[೨೮] ಕಾಟನಾಯಕನ ಮಗನಾದ ಕಿರಯ ಜಂಪಣ್ಣನಾಯಕನು ಮಾಡಿದಂತಹ ಕಾರ್ಯಗಳಿಂದ ಇಂದಿಗೂ ಸಹ ಜನಪದರ ಹಾಡುಗಳಲ್ಲಿ ಮನೆ ಮಾಡಿದ್ದಾನೆ. ಕಣಕುಪ್ಪೆ ಕೋಟೆಯಲ್ಲಿ ಇವನು ತೆಲುಗು ಕಮ್ಮಾರ ಗುರುವಯ್ಯ ಎಂಬುವವನ ಹತ್ತಿರ "ಕಾಟಮಲಿಂಗ" ಎಂಬ ಫಿರಂಗಿಯನ್ನು ದೇವುಗಾ (ಹಾವುಗ) ಎಂಬುವವನ ಹತ್ತಿರ ಉಚ್ಚಂಗಿ ಎಂಬ ಫಿರಂಗಿಯನ್ನು ಮಾಡಿಸಿದ.[೨೯] ಹಾವುಗ ಇದು ಹೆಸರೆ ಎಂಬುದು ಅಸ್ಪಷ್ಟ.

ನಿರ್ವಾಣಪ್ಪ, ಮೆದಕೇರಪ್ಪನ ಹೆಸರುಗಳಲ್ಲಿ ಒಂದೊಂದು ಬಾವಿಯನ್ನು ತೋಡಿಸಿದ. ಕಾಟನಾಯಕನ ತಮ್ಮ ನಿಂಗಪ್ಪನೊಂದಿಗೆ ಜೊತೆಗೂಡಿ ಕೋಟೆಯೊಳಗೆ ಮುಖ್ಯ ಪ್ರಾಣದೇವರ ಗುಡಿಯ ಹಿಂದೆ ಒಂದು ಅರಮನೆಯನ್ನು ಕಟ್ಟಿಸಿದ. ಕೋಟೆಗೆ ಚನ್ನಮಲ್ಲಪ್ಪನವರು ಚನ್ನಮಲ್ಲೇಶ್ವರ ದೇವರು ತಕ್ಕೊಂಡು ಬಂದಾಗ ಅವರಿಗೆ ಈ ಅರಮನೆಯನ್ನು ಬಿಟ್ಟುಕೊಟ್ಟನು.

ಚಿತ್ರದುರ್ಗ ತಾಲ್ಲೂಕಿಗೆ ಸೇರಿದ ಜಂಪಣ್ಣನಾಯಕನ ಕೋಟೆ ಜಂಪಣ್ಣನಾಯಕನ ಹೆಸರಿಟ್ಟಿರುವುದು ಇವನ ಶೂರತನಕ್ಕೆ ಸಾಕ್ಷಿ.[೩೦]

ಚಿತ್ರದುರ್ಗದ ಕಾಮಗೇತಿ ಅರಸರ ಪೈಕಿ (ಜಂಪಳ್ಳಿನಾಯಕ) "ಜಂಪಣ್ಣನಾಯಕ" ಎಂಬುವನು ಕಣಕುಪ್ಪೆ ಪ್ರದೇಶಕ್ಕೆ ದಳವಾಯಿಯಾಗಿ ನೇಮಕವಾದಾಗ ಇವನ ಬಗ್ಗೆ ಜನಪದ ಗೀತೆಗಳು ಹುಟ್ಟಿಕೊಂಡಿವೆ. ಜಗಳೂರು ಪರಿಸರದಲ್ಲಿ ವಿರೋಧಿಗಳೊಂದಿಗೆ ಯುದ್ಧ ಮಾಡಿದ ಜಟ್ಟಿಗನೂ ವೀರನೂ ಆದ ಜಂಪಣ್ಣ ನಾಯಕ ಜನಮನದಲ್ಲಿ ಮಾಸದ ಜೀವಂತವಾಗಿದ್ದಾನೆ.[೫]

ಎರಡು ಕೈಯಾಗೆ ಎರಡು ಮುರುಕಿಯ ಸರಪಳಿ
ಗರಡಿ ಮನಗ್ಹೋಗಿ ಬರುವಾನೆ ||ಕೋಲು||
ಗರಡಿ ಮನೆಯಾಗೆ ಬರುವ ಜಂಪಣ್ಣಾಗೆ
ಗುರುಕಾನೆದ್ದು ಕೈ ಮುಗುದೆ ||ಕೋಲು||
ಒಂಟೆ ಕೊರಳಿಗೆ ಗಂಟಿನ ಸರಮಾಲೆ
ಎಂಟಾಳ ನಡುವೆ ಬರುವಾನೆ ||ಕೋಲು||
ಎಂಟಾಳ ನಡುವೆ ಬರುವಾನೆ ಜಂಪಣ್ಣಾಗೆ
ಎಂಟ(ನೆ) ದಿವಸಕ್ಕೆ ಮರಣಾವೂ ||ಕೋಲು||
ಆನೆಯ ಕೊರಳಿಗೆ ಕೀಲು ಸರಪಣಿ ಹಾಕಿ
ಆರಾಳ ನಡುವೆ ಬರುವಾನೆ ||ಕೋಲು||
ಆರಾಳ ನಡುವೆ ಬರುವ ಜಂಪಣ್ಣಾಗೆ
ಆರೇ ದಿವಸಕ್ಕೆ ಮರಣಾವೂ ||ಕೋಲು||
ಕಟ್ಟಿ ಮೇಗಳ ಕಾಗಿ ರಕ್ತ ಕಕ್ಕುಲುವಾಗ
ಪುತ್ರ ಜಂಪಣ್ಣ ಬದುಕಾನೆ ||ಕೋಲು||
ಏರಿಮೇಗಳ ಕಾಗೆ ನೀರುನೀರೆ ಕಕ್ಕಲುಮಗ
ವೀರ ಜಂಪಣ್ಣ ಉಳಿವಾನೆ ||ಕೋಲು||
ಧೀರ ಜಂಪಣ್ಣ ಉಳಿವಾನೆ ಅವರ ತಾಯಿ
ಭೂಮಿಗೆ ಬಾಯಿ ಬಿಡುತಾಳೆ ||ಕೋಲು||
ಹಟ್ಟನೆ ತಿಪ್ಪಯ್ಯ ಸತ್ಯವುಳ್ಳನು ಕಾಣೆ
ಸತ್ತೆಮ್ಮೆ ಹಾಲು ಕರುದುಣ್ಹೋ ||ಕೋಲು||
ಸತ್ತೆಮ್ಮೆ ಹಾಲು ಕರೆದು ಪಾನಕ ಮಾಡಿ
ಸತ್ತೇಳು ಮಡಕೆ ಕರೆವ್ಯಾನೆ ||ಕೋಲು||
ಹಗಲನ್ನ ಚಚರಿಕೆ ಮುಗಿಲು ಮುಟ್ಟುವ ಬಾಣ
ಜಗಳೂರು ಪಾಪಯ್ಯ ಕಳುವ್ಯಾನೆ ||ಕೋಲು||

ಬರಿಯುತ ಬರಿಗಾಲು ಕರಿಯು ಕಗ್ಗಲಿ ಮುಳ್ಳು
ಗೆಳೆಯ ಕರವು ಬರುವಾಗ ||ಕೋಲು||
ಗೆಳೆಯನೆ ಬರುವಾಗ ಕಣ್ಣೀರು ಸ್ನಾನಂದು
ಸುರಿದಾವು ||ಕೋಲು||

**ಕೋಟೆಗೆ ಮುತ್ತಿಗೆ**

ಕಣಕುಪ್ಪೆಯಲ್ಲಿ ಕಿರಿಯ ಜಂಪಣ್ಣನ ನಾಯಕತನ ಇದ್ದಾಗ ಚಿತ್ರದುರ್ಗದ ಕೋಟೆಗೆ ಹೈದರನ ಸೈನ್ಯ ಮುತ್ತಿಗೆ ಹಾಕಿತು. ಆಗ ಅವನ ಸೈನ್ಯ ಕಣಕುಪ್ಪೆಗೆ ಬಂದು ಹನ್ನೊಂದು ದಿನಗಳ ಕಾಲ ಮುತ್ತಿಗೆ ಹಾಕಿತು. ಆಗ ಇದು ನವಾಬರ ಠಾಣ್ಯ ಆಯಿತು. ಪಕ್ಕ ಮುಷ್ಟಿಗರ ಹಳ್ಳಿ, ಬರಮನಹಳ್ಳಿಯಲ್ಲಿ ಒಂದು ತಿಂಗಳ ಕಾಲ ಇದ್ದು ಮುಂದೆ ಗುಡೇಕೋಟೆ, ಮೊಳಕಾಲ್ಮೂರು ಕಡೆಗೆ ಹೋಯಿತು. ನಂತರ ಬಂದ ಟಿಪ್ಪು ಮೂನ್ನೂರ ಜನ ಸೈನಿಕರನ್ನು ಈ ಕೋಟೆಯಲ್ಲಿ ಇಟ್ಟನು.

ಬ್ರಿಟೀಷರು ಟಿಪ್ಪುವಿನ ಮೇಲೆ ದಾಳಿ ಮಾಡಿದಾಗ ಬೆಂಗಳೂರನ್ನು ವಶಪಡಿಸಿಕೊಂಡು ಬ್ರಿಟೀಷರು ಮರಾಠರಿಗೆ ಬಿಟ್ಟುಕೊಟ್ಟರು. ಮರಾಠರ ಪರುಶುರಾಮಭಾವ ಸರದಾರನ ಸೈನ್ಯ ಬೆಂಗಳೂರಿಂದ ನೇರವಾಗಿ ಕಣಕುಪ್ಪೆಗೆ ಬಂದಾಗ ಕಣಕುಪ್ಪೆ ಕ್ರಿಷ್ಣಾಜಿ ಠಾಣ್ಯ ಆಯಿತು. ಪುನಃ ಟಿಪ್ಪು ಸುಲ್ತಾನ್ ಗೆದ್ದನು. ನಂತರ ಬ್ರಿಟಿಷರು ಟಿಪ್ಪುವನ್ನು ಸೋಲಿಸಿ ಶ್ರೀರಂಗಪಟ್ಟಣವನ್ನು ವಶಪಡಿಸಿಕೊಂಡಾಗ ಈ ಪ್ರದೇಶವನ್ನು ಬ್ರಿಟಿಷರು ಮೈಸೂರು ಅರಸರಿಗೆ ಬಿಟ್ಟುಕೊಟ್ಟರು.[೨೦] ಇಲ್ಲಿ ಸ್ವಲ್ಪ ಅಸ್ಪಷ್ಟತೆ, ಅಪೂರ್ಣ ಮಾಹಿತಿ ಇದೆ) ಎಂ.ಎಂ.ಕಲಬುರ್ಗಿ ಸಂಪಾದಿಸಿದ ಕೈಫಿಯತ್ತಿನಲ್ಲಿ ಅಪೂರ್ಣ ಮಾಹಿತಿ ಇದೆ.[೨೧]

ಮದಕರಿ ನಾಯಕನು (ತೂಲಹಳ್ಳಿ) ಕದನದಲ್ಲಿ ಹರಪನಹಳ್ಳಿಯವರ ವಿರುದ್ಧ ಹೋರಾಡಲು ಹೊಸಕೆರೆ ಹತ್ತಿರ ಬಂದು ಇಳಿದನು. ಅಲ್ಲಿ ಹರಪನಹಳ್ಳಿ ಸೈನ್ಯವನ್ನು ಸೋಲಿಸಿ ಅಲ್ಲಿಂದ ವಾಪಾಸು ಬರುವಾಗ ಕಣಕುಪ್ಪೆಗೆ ಬಂದು ಅಲ್ಲಿ ಒಂದು ರಾತ್ರಿ ಇದ್ದು ದೇವರ ದರ್ಶನ ಮಾಡಿಕೊಂಡು ಬೆಳಿಗ್ಗೆ ಚಿತ್ರದುರ್ಗಕ್ಕೆ ಹೋದನು.[೨೨]

**ಫಿರಂಗಿಗಳನ್ನು ಒಡೆದುಹಾಕಿದ್ದು**

ಚಿತ್ರದುರ್ಗದ ಮೇಲೆ ನವಾಬನು ದಾಳಿ ಮಾಡಿ ವಶಪಡಿಸಿಕೊಂಡಾಗ "ಕಣಕುಪ್ಪೆಯ ಮೇಲುದುರ್ಗದ ಕೋಟೆಯ ಮೇಲೆ ಇರುವ ಫಿರಂಗಿ ಕೆಳಗೆ ಹಾಕಿ ಅದು ಒಡೆದು ಹೋಗುತ್ತದೆ. ಗಾಡಿಯ ಮೇಲೆ ತನ್ನಿ" ಎಂದು ಹೇಳಿಕಳುಹಿಸಿದ. ಆಗ ಫಿರಂಗಿಯನ್ನು ಗುಡ್ಡದ ಮೇಲಿಂದ ಕೆಳಗೆ ಹಾಕಿದರು. ಅದು ಮೂರು ತುಂಡಾಯಿತು. ಆಗ ಅವುಗಳನ್ನು ದುರ್ಗದ ಬಳಿ ಕಳುಹಿಸಿಕೊಟ್ಟರು.

ಕಣಕುಪ್ಪೆಯು ಸುಲ್ತಾನನ ಠಾಣ್ಯ ಆದಾಗ ಸುಬೇದಾರ ಷೇಕು ಇಸುಮಾಲುಗೆ ಅಲ್ಲಿರುವ ಉಚ್ಚಂಗಿ ಮತ್ತು ಕಾಟಮಲಿಂಗ ಎಂಬ ತೋಪುಗಳನ್ನು ಕಳುಯಿಸಿ ಕೊಡಿ ಎಂಬ ಪರವಾನಿಗೆ ಬಂದಿತು. ಆಗ ಅವನು ಗುಡ್ಡದಿಂದ ಕೆಳಗೆ ಹಾಕಿಸಿ ಕಮ್ಮಾರನನ್ನು ಕರೆಸಿ ಒಡೆದು ಅದರ ಕಬ್ಬಿಣವನ್ನು ಅರಮನೆಯಲ್ಲೇ

ಇಟ್ಟ. ಅಸಫ್ ಮಹಮ್ಮದ್‌ಹಾಷಾಂ ಕೆಲವು ಕಬ್ಬಿಣದ ತುಕಡಿಗಳನ್ನು ಹೊಳಲ್ಕೆರೆಗೆ ತರಿಸಿಕೊಂಡು ಪಟ್ಟಣಕ್ಕೆ ಕಳುಹಿಸಿ ಉಳಿದ ಕಬ್ಬಿಣವನ್ನು ಅರಮನೆಯಲ್ಲೆ ಹಾಕಿದ. ಆಗ ಅಸಫ್ ಮಹಮ್ಮದ್‌ಹಾಷಾಂ ಗುಲಾಂ ಮೊಹದ್ದೀನನ ವಿಚಾರಣೆ ಮಾಡಿ ಕಿಲ್ಲೆದಾರ ಸೈದಹುಸೇನಿಗೆ “ಇಲ್ಲಿ ತೋಪುಗಳು ಇಲ್ಲ. ಬಸವನಕೋಟೆ ತೋಪು, ಆಲೂರು ತೋಪು ತರಿಸಿಕೊಡು” ಎಂದಾಗ ಅವುಗಳನ್ನು ತರಿಸಿ ಕಾಟಮಲಿಂಗ ಮತ್ತು ಉಚ್ಚಂಗಿ ಇದ್ದ ಸ್ಥಳಗಳಿಗೆ ಇಟ್ಟರು. ಇವು ದೊಡ್ಡ ಹೇರಳ ಹಣ್ಣಿನ ಪ್ರಮಾಣದ ಗುಂಡುಗಳಾಗಿದ್ದವು.[೬]

## ಕೊನೆಟಿಪ್ಪಣಿ

೦೧. ಲಕ್ಷ್ಮಣ್ ತೆಲಗಾವಿ, ಚಿತ್ರದುರ್ಗ ನಾಯಕ ಅರಸರು ರಾಜಕೀಯ ಚರಿತ್ರೆ ಪುಟ-೦೧

೦೨. ಕೋಲಾರ ಜಿಲ್ಲಾ ಗೆಜೆಟಿಯರ್

೦೩. ಆರ್.ಗೋಪಾಲ್ ಹೊಸಪೇಟೆ, (ಸಂ)., ಕೋಲಾರ ಜಿಲ್ಲಾ ಇತಿಹಾಸ ಪುರಾತತ್ವ, ಪುಟ-೧೫೬

೦೪. ಎಂ.ಎಂ.ಕಲಬುರ್ಗಿ, ಕರ್ನಾಟಕದ ಕೈಫಿಯತ್ತುಗಳು, ಪುಟ-೨೭

೦೫. ಅದೇ, ಪುಟ-೧೫೬

೦೬. ಎಂ.ಎಸ್.ಪುಟ್ಟಣ್ಣ, ಚಿತ್ರದುರ್ಗದ ಪಾಳೆಗಾರರು, ಪುಟ-೩೬

೦೭. ರಾಜಬಿಚ್ಚುಗತ್ತಿ ಭರಮಣ್ಣನಾಯಕ, ಗಜಕೇಸರಿ, ಪುಟ-೭೯

೦೮. ಅದೇ, ಪುಟ-೭೯

೦೯. ಎಂ.ಜಿ.ವೆಂಕಟೇಶಯ್ಯ, ಚಿತ್ರದುರ್ಗದ ಪಾಳೆಗಾರರು, ಪುಟ-೨೫

೧೦. ಅದೇ, ಪುಟ-೨೫

೧೧. ರಾಜಬಿಚ್ಚುಗತ್ತಿ ಭರಮಣ್ಣನಾಯಕ, ಪೂರ್ವೋಕ್ತ, ಪುಟ-೭೯

೧೨. ಎಂ.ಎಸ್.ಪುಟ್ಟಣ್ಣ, ಪೂರ್ವೋಕ್ತ, ಪುಟ-೪೨

೧೩. ಎಂ.ಎಂ.ಕಲಬುರ್ಗಿ, ಕರ್ನಾಟಕದ ಕೈಫಿಯತ್ತುಗಳು, ಪುಟ-೨೭

೧೪. ಬಾಗೂರ್ ಆರ್.ನಾಗರಾಜಪ್ಪ, ಹೊಸದುರ್ಗದ ಸುತ್ತ, ಪುಟ-೧೦೩

೧೫. ಎಂ.ಎಸ್.ಪುಟ್ಟಣ್ಣ, ಪೂರ್ವೋಕ್ತ, ಪುಟ-೩೭

೧೬. ಅದೇ, ಪುಟ-೩೯

೧೭. ಅದೇ, ಪುಟ-೪೧

೧೮. ರಾಜಬಿಚ್ಚುಗತ್ತಿ ಭರಮಣ್ಣನಾಯಕ, ಪೂರ್ವೋಕ್ತ, ಪುಟ-೮೧

೧೯. ಅದೇ, ಪುಟ-೮೧

೨೦. ಅದೇ, ಪುಟ-೮೨

೨೧. ಅದೇ, ಪುಟ-೮೩

೨೨. ಎಂ.ಎಂ.ಕಲಬುರ್ಗಿ, ಪೂರ್ವೋಕ್ತ, ಪುಟ-೨೮

೨೩. ಅದೇ, ಪುಟ-೨೯

೨೪. ಅದೇ, ಪುಟ-೩೦

೨೫. ವಿರೂಪಾಕ್ಷಿ ಪೂಜಾರಹಳ್ಳಿ, ಚಿನ್ನಪಗರಿ ಸಿರಿ, ಪುಟ-೧೨೯

೨೬. ಅದೇ, ಪುಟ-೧೨೯

೨೭. ಎಂ.ಎಂ.ಕಲಬುರ್ಗಿ, ಪೂರ್ವೋಕ್ತ, ಪುಟ-೩೦

೨೮. ವಿರೂಪಾಕ್ಷಿ ಪೂಜಾರಹಳ್ಳಿ, ಪೂರ್ವೋಕ್ತ, ಪುಟ-೧೩೦

೨೯. ಅದೇ, ಪುಟ-೧೩೧

೩೦. ಎಂ.ಎಂ.ಕಲಬುರ್ಗಿ, ಪೂರ್ವೋಕ್ತ, ಪುಟ-೩೧

೩೧. ಎಂ.ಎಂ.ಕಲಬುರ್ಗಿ, ಪೂರ್ವೋಕ್ತ, ಪುಟ-೩೩,೩೪

೩೨. ಎಂ.ಎಂ.ಕಲಬುರ್ಗಿ, ಪೂವೋಕ್ತ, ಪುಟ-೩೩,೩೩

೩೩. ಅದೇ, ಪುಟ-೩೩

## ಅಧ್ಯಾಯ - ನಾಲ್ಕು

# ಸ್ಮಾರಕಗಳು

## ಕೋಟೆ, ಕೊತ್ತಲು, ದೇವಾಲಯ, ಮಠಮಂದಿರ, ಬಾವಿ, ಕೆರೆ ಇತ್ಯಾದಿ

ಕಣಕುಪ್ಪೆ ಪರಿಸರವು ಐತಿಹಾಸಿಕ ಚರಿತ್ರೆಯುಳ್ಳ ಪ್ರದೇಶವಾಗಿದೆ. ಈ ಪರಿಸರದಲ್ಲಿ ಅನೇಕ ಸ್ಮಾರಕಗಳು ನಿರ್ಮಾಣಗೊಂಡಿರುವುದನ್ನು ಕಾಣುತ್ತೇವೆ. ಪಾಳೆಯಗಾರರ ಕಾಲದಲ್ಲಿ ನಿರ್ಮಾಣವಾದ ಕಣಕುಪ್ಪೆ ಕೋಟೆ ಹಾಗೂ ರಂಗಯ್ಯನ ದುರ್ಗದ ಕೋಟೆಗಳು, ಕಲ್ಯಾಣಿ ಚಾಲುಕ್ಯರ ಕಾಲದಿಂದ ಪಾಳೆಗಾರರ ಕಾಲದವರೆಗಿನ ಅನೇಕ ಶೈವ, ವೈಷ್ಣವ ಶಾಕ್ತ ದೇವಾಲಯಗಳು, ಮಠಗಳು, ಬಾವಿಗಳು, ಕೆರೆಗಳನ್ನು ಕಂಡುಬರುತ್ತವೆ. ಕಣಕುಪ್ಪೆಕೋಟೆ ಹಾಗೂ ರಂಗಯ್ಯನ ದುರ್ಗದ ಕೋಟೆಗಳ ನಿರ್ಮಾಣ ಸ್ವರೂಪ ಅವುಗಳ ಹಾಗೂ ಅಲ್ಲಿರುವಂತಹ ಅವಶೇಷಗಳು, ಪ್ರಮುಖ ದೇವಾಲಯಗಳು ಸ್ಮಾರಕಗಳ ಬಗ್ಗೆ ಈ ಕೆಳಗಿನಂತೆ ಅಧ್ಯಯನ ಮಾಡಲಾಗಿದೆ.

### ಕೋಟೆಗಳು

ಕೋಟೆ ಎಂದರೆ ಅವರಣವುಳ್ಳ ಪ್ರದೇಶ ಎಂದರ್ಥ. ಕೋಟೆ ಅಥವಾ 'ರಕ್ಷಾವರಣ' ಇದನ್ನು ಸಂಸ್ಕೃತದಲ್ಲಿ 'ದುರ್ಗ' ಎಂದು ಹೇಳುತ್ತಾರೆ. ಕೋಟಿಗೆಪುರ, ಪ್ರಕಾರ, ಕೆಲ್ಲೆ, ಎಂಬ ಅರ್ಥಗಳುಂಟು ಸೈನಿಕರುಗಳಿಂದ ಆವರಿಸಲ್ಪಟ್ಟ ರಕ್ಷಿತವಾದ ಮತ್ತು ರಕ್ಷಣೆಗೆ ಮುಡುಪಾಗಿರುವ ಗಟ್ಟಿಯಾದ ಸ್ಥಳವೇ ಕೋಟೆ ಎಂದೆನಿಸಿಕೊಳ್ಳುತ್ತದೆ.

ಊರುಗಳು ಹಲವಾರು ಊರುಗಳು ಒಟ್ಟುಗೂಡಿ ರಾಜ್ಯಗಳು ಸ್ಥಾಪನೆಯಾದ ಮೇಲೆ ಆಳುವ ಅರಸರು ತಮ್ಮ ರಾಜ್ಯಗಳನ್ನು ಸಂರಕ್ಷಿಸಿಕೊಳ್ಳಲು ರಾಜಧಾನಿಗಳಲ್ಲಿ ಹಾಗೂ ಗಡಿ ಪ್ರದೇಶಗಳಲ್ಲಿ ಬೃಹತ್ ಆಕಾರದ ಕೋಟೆಗಳನ್ನು ಕಟ್ಟಿಸಿದರು. ಹೀಗಾಗಿ ಪ್ರಾಚೀನ ಕಾಲದಲ್ಲಿ ಶತ್ರುಗಳ ಧಾಳಿಯಿಂದ ರಕ್ಷಿಸುವ ಕಾರ್ಯದಲ್ಲಿ ಕೋಟೆ ಮಹತ್ತರ ಪಾತ್ರ ವಹಿಸಿದೆ. ಹಿಂದೆ ಯುದ್ಧಗಳು ನಡೆದಾಗ ಹೊರಗಿನ

ಆಕ್ರಮಣ ತಡೆಯಲು ಕೋಟೆ ಕಟ್ಟಿಸಿಕೊಳ್ಳುವುದು ಅವಶ್ಯಕವಾಗಿತ್ತು. ಕೋಟೆಯು ರಾಜಕೀಯವೆಂಬ ದೇಹದ ಪ್ರಮುಖ ಹಾಗೂ ಅನಿವಾರ್ಯವಾದ ಅಂಗವಾಗಿದ್ದಿತು. ಯಾವುದೇ ರಾಜ್ಯದ ರಾಜಧಾನಿಯು ದೇಹದಲ್ಲಿನ ಹೃದಯವಿದ್ದಂತೆ ರಾಜಧಾನಿಯನ್ನು ವಶಪಡಿಸಿಕೊಂಡರೆ ಸಾಮಾನ್ಯವಾಗಿ ಒಂದು ರಾಜ್ಯವು ತನ್ನ ಅಸ್ತಿತ್ವವನ್ನೇ ಕಳೆದುಕೊಳ್ಳುತ್ತಿದ್ದಿತು. ಆದುದರಿಂದ ಕೋಟೆಯ ನಿರ್ಮಾಣವು ರಕ್ಷಣೆಯ ದೃಷ್ಟಿಯಿಂದ ಅತ್ಯವಶ್ಯಕವಾಗಿದ್ದಿತು. ಈ ರೀತಿಯ ಕೋಟೆಗಳು ಕಣಕುಪ್ಪೆ ಪರಿಸರದಲ್ಲಿ ಕಂಡು ಬರುತ್ತವೆ.

**ಕಣಕುಪ್ಪೆ ಕೋಟೆ**

ಕ್ರಿ.ಶ. ೧೮೮೨ರಲ್ಲಿ ಕಣಕುಪ್ಪೆ ತಾಲ್ಲೂಕು ಕೇಂದ್ರವಾಗಿತ್ತು. ಕ್ರಿ.ಶ. ೧೮೮೬ರಲ್ಲಿ ಜಗಳೂರು ಸ್ವತಂತ್ರ ತಾಲ್ಲೂಕು ಆಯಿತು. ಚಿತ್ರದುರ್ಗ ಜಿಲ್ಲೆಯ ಒಂಬತ್ತು ತಾಲ್ಲೂಕುಗಳಲ್ಲಿ ಜಗಳೂರು ಒಂದಾಗಿತ್ತು. ೧೯೯೭ರಿಂದ ದಾವಣಗೆರೆ ಜಿಲ್ಲೆಯ ತಾಲ್ಲೂಕು ಕೇಂದ್ರವಾಗಿದೆ.

ಕಣಕುಪ್ಪೆ ಇಂದು ಸಾಧಾರಣ ಗ್ರಾಮವಾದರು ಹಿಂದೆ ಇದು ಒಂದು ಐತಿಹಾಸಿಕ ಮಹತ್ವ ಪಡೆದ ಸ್ಥಳವಾಗಿತ್ತು. ಹಿಂದೆ ಓಬಳನಹಳ್ಳಿ ಎಂಬ ಗ್ರಾಮವನ್ನು ಮುರಿದು ಕಣಕುಪ್ಪೆ ಕಟ್ಟಿದ್ದಾರೆ.[೧] ಚಿತ್ರದುರ್ಗ ಸಂಸ್ಥಾನವನ್ನು ಚಿಕ್ಕಣ್ಣನಾಯಕರು ಆಳ್ವಿಕೆ ಮಾಡುತ್ತಿರುವಾಗ ಕಣಕುಪ್ಪೆಗೆ ಕೋಮಾರಪ್ಪನನ್ನು ನೇಮಿಸಿದನು. ಅವರು ಬೇಡಕಳ್ಳರು ಉಪಟಳ ತಡೆಯಲು ಹಾಗೂ ಗುಡ್ಡದಲ್ಲಿದ್ದ ವಿಶಾಲ ಪ್ರದೇಶ ಹಾಗೂ ಗವಿಗಳನ್ನು ನೋಡಿ ಇಲ್ಲಿ ಕೋಟೆ ಕಟ್ಟಬೇಕು ಎಂದು ತೀರ್ಮಾನಿಸಿ ಅವರ ಕಾಲದಿಂದ ಕಿರಿಯ ಜಂಪಣ್ಣನಾಯಕರವರೆಗೂ ಹಂತ ಹಂತವಾಗಿ ಕೋಟೆಯನ್ನು ಕಟ್ಟುತ್ತಾ ಬಂದಿದ್ದಾರೆ. ಈ ಕೋಟೆ ಚಿತ್ರದುರ್ಗದ ನಾಯಕರಿಗೂ, ಹರಪನಹಳ್ಳಿ ಪಾಳೆಯಗಾರರಿಗೂ ಜರುಗುತ್ತಿದ್ದ ಕಾಳಗಕ್ಕೆ ಚಿತ್ರದುರ್ಗದ ನಾಯಕರಿಗೆ ರಕ್ಷಣಾ ಕೋಟೆಯಾಗಿತ್ತು.

**ಕೋಟೆಯ ರಚನೆ**

ಕೋಟೆಯನ್ನು ಸ್ಥಳೀಯ ವೈರಿಗಳ ದಾಳಿಗಳಿಂದ ರಕ್ಷಿಸಲು ಉದ್ದೇಶಗಳನ್ನು ಇಟ್ಟುಕೊಂಡು ರಚಿಸಿದ್ದಾರೆ. ಚಿತ್ರದುರ್ಗದ ಕೋಟೆಯ ರೀತಿಯಲ್ಲಿಯೇ ಈ ಕೋಟೆಯನ್ನು ರಚಿಸಲಾಗಿದೆ. ಸುಮಾರು ೨೫ ಎಕರೆ ಪ್ರದೇಶದಲ್ಲಿ ಮೂರು ಗುಡ್ಡಗಳನ್ನು ಬಳಸಿಕೊಂಡು ಗಿರಿದುರ್ಗವನ್ನು ನಿರ್ಮಿಸಲಾಗಿದೆ.

ಮೇಲುದುರ್ಗ, ಮನ್ನಲಗಟ್ಟಿ, ಕೊತ್ತಲಗಟ್ಟಿ ಎಂಬ ಮೂರು ಗುಡ್ಡಗಳನ್ನು ಬಳಸಿಕೊಂಡು ವಿವಿಧ ವಿನ್ಯಾಸ ಮಾದರಿಯಲ್ಲಿ ನಿರ್ಮಿಸಿರುವ ಬುರುಜು, ಬತೇರಿ, ದ್ವಾರಬಾಗಿಲು ಮುಂತಾದ ಸ್ಮಾರಕಗಳಿವೆ. ಮನ್ನಲಗಟ್ಟಿ ಗುಡ್ಡದ ರಚನೆಗಳು ಆಡಳಿತಾತ್ಮಕ ದೃಷ್ಟಿಯಿಂದ ನಿರ್ಮಿಸಿದ್ದಾರೆ. ಕೊತ್ತಲಗಟ್ಟಿ ಹಾಗೂ ಮೇಲುದುರ್ಗದ ರಚನೆಗಳು ಸೈನಿಕರ ಆಡಳಿತಾತ್ಮಕ ದೃಷ್ಟಿಯಿಂದ ಮತ್ತು ಸೈನಿಕರ ವಸತಿಯ ಹಿನ್ನೆಲೆಯಲ್ಲಿ ನಿರ್ಮಿಸಿರುವುದನ್ನು ಕಾಣಬಹುದು. ಕೋಟೆಗೋಡೆ ಹಾಗೂ ಇತರ ಸ್ಮಾರಕಗಳನ್ನು ನಿರ್ಮಿಸಲು ಬೆಟ್ಟದಲ್ಲಿ ದೊರೆಯುವ ಕಲ್ಲುಗಳನ್ನೇ ಉಪಯೋಗಿಸಿರುವುದು ಕಂಡುಬರುತ್ತದೆ. ಕೆಲವು

ಕಡೆ ಕಲ್ಲುಗಳನ್ನು ಸೀಳದೆ ಜೋಡಿಸಿದ್ದಾರೆ. ಕೆಲವು ಕಡೆ ಸೀಳಿ ನಯಗೊಳಿಸಿ ಜೋಡಿಸಿದ್ದಾರೆ. ಕೋಟೆ ಗೋಡೆಯು ೨೦ ರಿಂದ ೨೫ ಅಡಿ ಎತ್ತರವಿದೆ. ಆಯಕಟ್ಟಿನ ಸ್ಥಳಗಳಲ್ಲಿ ದ್ವಾರಬಾಗಿಲುಗಳು, ಬುರುಜುಗಳು ಹಾಗೂ ಗೋಡೆಗಳಲ್ಲಿ ಬಂದೂಕು ರಂಧ್ರಗಳಿವೆ.

ರಕ್ಷಣೆಗೆ ಹೆಚ್ಚು ಒತ್ತು ಕೊಟ್ಟು ದ್ವಾರಬಾಗಿಲುಗಳನ್ನು ನಿರ್ಮಿಸಿದ್ದಾರೆ. ಗವಿ ಮಠದ ಮೂಲಕ ಬೆಟ್ಟವನ್ನು ಹತ್ತುವಾಗ ನಮಗೆ ಸಿಗುವ ದಾರಿಯೇ ಕೋಟೆಯ ಪ್ರಮುಖ ದ್ವಾರಬಾಗಿಲು, ಇದು ಪೂರ್ವದಿಕ್ಕಿನಲ್ಲಿರುವ ಜಗಳೂರು ಬಾಗಿಲಿನ ದಿಕ್ಕಿನವರೆಗೂ ಸಾಗುತ್ತದೆ. ಅಲ್ಲಲ್ಲಿ ರಸ್ತೆಯ ಬದಿಗಳಲ್ಲಿ ಎತ್ತರದ ಗೋಡೆಗಳಿವೆ. ರಸ್ತೆಯ ಮಧ್ಯದಲ್ಲಿ ಹಾಸಗಲ್ಲನ್ನು ಹಾಕಲಾಗಿದೆ.

ಮನ್ನಲಗಟ್ಟ ಗುಡ್ಡಕ್ಕೆ ಹೊಂದಿಕೊಂಡಂತೆ ಪಶ್ಚಿಮ ಭಾಗದಲ್ಲಿ ಉತ್ತರದಿಂದ ದಕ್ಷಿಣಕ್ಕೆ ಸುಮಾರು ೫೧೦ ಮೀಟರ್ ಉದ್ದ ಕೋಟೆ ಗೋಡೆಯನ್ನು ನಿರ್ಮಿಸಲಾಗಿದೆ. ಗುಡ್ಡದ ತುದಿಯಲ್ಲಿ ಚೌಕಾಕಾರದ ಬುರುಜನ್ನು ೨೦x೨೦ ಅಳತೆಯಲ್ಲಿ ನಿರ್ಮಿಸಲಾಗಿದೆ. ಬುರುಜಿನ ಒಳಭಾಗದಲ್ಲಿ ಶತ್ರುಗಳನ್ನು ವೀಕ್ಷಿಸಲು ಚಿಕ್ಕ ಕಂಡಿಯನ್ನು ಬಿಡಲಾಗಿದೆ. ಕೋಟೆ ಗೋಡೆಯು ೨೦ ಅಡಿ ಎತ್ತರ ೬ ಅಡಿ ಅಗಲವಿದೆ. ಗೋಡೆಗೆ ಅಲ್ಲಲ್ಲಿ ಕಾವಲು ಗೋಪುರಗಳಿವೆ. ಪಶ್ಚಿಮದ ಕೋಟೆಗೆ ಸುಮಾರು ೬೧೦ ಮೀಟರ್ ರಕ್ಷಣಾತ್ಮಕ ಗೋಡೆಯನ್ನು ನಿರ್ಮಿಸಲಾಗಿದೆ. ಕೋಟೆಯ ಮಧ್ಯಭಾಗದಲ್ಲಿ ವಿಶಾಲವಾದ ಬಂಡೆಯ ಬಯಲು ಪ್ರದೇಶವಿದ್ದು, ನಾಲ್ಕೂ ಭಾಗದಲ್ಲಿ ಚೌಕಾಕಾರದ ಬುರುಜುಗಳಿವೆ. ಪೂರ್ವಭಾಗದಲ್ಲಿ ದಕ್ಷಿಣಕ್ಕೆ ೭ ಅಡಿ ಎತ್ತರದ ದ್ವಾರಬಾಗಿಲಿದೆ ಸ್ಥಳೀಯರು ಈ ದ್ವಾರ ಬಾಗಿಲಿಗೆ 'ಉಚ್ಚಂಗಿ ದ್ವಾರ' ಬಾಗಿಲು ಎಂದು ಕರೆಯುತ್ತಾರೆ. ಬಾಗಿಲ ಮುಂದೆ ೪ ಅಡಿ ಅಗಲ ೪ ಅಡಿ ಎತ್ತರದ ಕಟಾಂಜನವಿದೆ. ಬಾಗಿಲುವಾಡದ ಮೇಲೆ ಪದ್ಮದ ಅಲಂಕರಣ ಮತ್ತು ಭುವನೇಶ್ವರಿ ಚಿತ್ರವಿದೆ. ಬಾಗಿಲುವಾಡದ ದಕ್ಷಿಣಾಭಿಮುಖವಾಗಿ ಕೆತ್ತಿರುವ ಹನುಮಂತನ ಉಬ್ಬು ಶಿಲ್ಪವಿದೆ. ಇಲ್ಲಿಂದ ಕಲ್ಲು ಬಾಗಿಲಿಗೆ ಪ್ರವೇಶ ಕಲ್ಪಿಸಲಾಗಿದೆ. ಮೂರು ಗುಡ್ಡಗಳ ಮಧ್ಯಭಾಗದಲ್ಲಿ ಅನೇಕ ಸ್ಮಾರಕಗಳಿವೆ. ಮೇಲುದುರ್ಗ ಮತ್ತು ಮನ್ನಲಗಟ್ಟ ಗುಡ್ಡಕ್ಕೆ ಅಡ್ಡಲಾಗಿ ೨೦ ಅಡಿ ಎತ್ತರದ ಕಲ್ಲಿನ ಗೋಡೆಯನ್ನು ನಿರ್ಮಿಸಲಾಗಿದೆ. ಈ ಗೋಡೆಯ ಹಿಂಭಾಗದಲ್ಲಿನ ಪ್ರದೇಶವನ್ನು ಅರಮನೆ ಆವರಣ ಎಂದು ಕರೆಯಬಹುದಾದ ಕಟ್ಟಡದ ಅವಶೇಷಗಳಿವೆ. ಈ ಗೋಡೆಗೆ ದಕ್ಷಿಣೋತ್ತರವಾಗಿ ಕಲ್ಲು ಬಾಗಿಲನ್ನು ನಿರ್ಮಿಸಲಾಗಿದೆ. ಅದಕ್ಕೆ ಹೊಂದಿಕೊಂಡಂತೆ ದಿಡ್ಡಿ ಬಾಗಿಲು ಇದೆ. ಹತ್ತಿರದಲ್ಲಿಯೇ ಹಾಲುಹೊಂಡ ಎಂದು ಕರೆಯುವ ಪುಷ್ಕರಣಿ ಇದೆ. ಹೊಂಡದ ಸುತ್ತಲೂ ಕಲ್ಲಿನ ಪಾವಟಿಗಳನ್ನು ನಿರ್ಮಿಸಿದ್ದು, ಇಳಿಯಲು ಮೆಟ್ಟಿಲುಗಳನ್ನು ಹಾಕಲಾಗಿದೆ.

ಹೊಂಡದ ಸಮೀಪದಲ್ಲಿ ಈಶ್ವರ, ಭೈರವ ದೇವಾಲಯಗಳಿವೆ. ಈ ದೇವಾಲಯಗಳನ್ನು ಕಾಟನಾಯಕ ನಿರ್ಮಿಸಿದನೆಂದು ಕೈಫಿಯತ್ತಿನಲ್ಲಿ ಹೇಳಿದೆ.[೨] ದೇವಾಲಯದ ಹಿಂಭಾಗದಲ್ಲಿ ಸಂತೆ ಮೈದಾನದ ಪ್ರದೇಶವಿದೆ. ಕಾಟನಾಯಕನ ಅವಧಿಯಲ್ಲಿ ಈ ಭಾಗದಲ್ಲಿ ಪೇಟೆ ಮನೆಗಳನ್ನು ಕಟ್ಟಿರುವುದು ಕೈಫಿಯತ್ತಿನಲ್ಲಿ ದಾಖಲಾಗಿದೆ.[೩]

ಕೊತ್ತಲಗುಡ್ಡದ ಮೇಲೆ ಒಂದು ಆಂಜನೇಯನ ಶಿಲ್ಪ ಹಾಗೂ ಎರಡು ನೈಸರ್ಗಿಕ ನೀರಿನ ಹೊಂಡಗಳನ್ನು ಹೊರೆತುಪಡಿಸಿದರೆ ಮತ್ತಾವುದೇ ಸ್ಮಾರಕಗಳಿಲ್ಲ ಕೋಟೆ ಪ್ರದೇಶದಲ್ಲಿ ಭೈರವೇಶ್ವರ, ಮಾರಮ್ಮ, ಆಂಜನೇಯ ದೇವಾಲಯಗಳಿವೆ. ಸಮೀಪದಲ್ಲಿಯೇ ಜಗಲೂರಜ್ಜನ ಬಾಗಿಲು ಇದೆ. ಗುಡ್ಡದ ಪಶ್ಚಿಮ ಭಾಗದಲ್ಲಿ ವೃತ್ತಾಕಾರದ ಬತೇರಿ ಇದೆ. ಬತೇರಿ ಸಮೀಪದಲ್ಲಿಯೇ ಭರಮಕ್ಕನ ಹೊಂಡ ಮತ್ತು ಆಂಜನೇಯನ ದೇವಾಲಯವಿದೆ. ಹಿಂದೆ ಈ ಪ್ರದೇಶದಲ್ಲಿ ಕೋಟೆಗೆ ಪ್ರವೇಶ ಮಾಡಲು ದ್ವಾರ ಬಾಗಿಲು ಇತ್ತೆಂದು ಹೇಳುತ್ತಾರೆ. ಆದರೆ ಅದು ಈಗ ಕಂಡುಬರುವುದಿಲ್ಲ. ಗುಡ್ಡದ ವಿಶಾಲ ಪ್ರದೇಶದಲ್ಲಿ ಸ್ಥಳದುರ್ಗವಿದ್ದುದರ ಕುರುಹುಗಳಿವೆ. ಅಲ್ಲದೆ ಕೆರೆಜಂಪ್ಪಣ್ಣನ ಅವಧಿಯಲ್ಲಿನ ಕೆರೆ ಮತ್ತು ಮದಕೆರಪ್ಪನ ಬಾವಿಗಳು ಈ ಭಾಗದಲ್ಲಿ ಕಂಡುಬರುತ್ತಿವೆ.

**ಕೋಟೆಯೊಳಗೆ ಕುಡಿಯುವ ನೀರಿನ ವ್ಯವಸ್ಥೆ**

ಮನ್ನಲಗಟ್ಟ ಗುಡ್ಡದ ಮೇಲೆ ಸುಮಾರು ೩೦ ಮೀಟರ್‌ನಷ್ಟು ವಿಶಾಲವಾದ ನೈಸರ್ಗಿಕ ಹೊಂಡವಿದೆ. ಕಡಿದಾದ ಬಂಡೆಯ ಮೂಲೆಯಲ್ಲಿ ಆರು ಅಡಿ ಎತ್ತರದ ಗೋಡೆಯನ್ನು ನಿರ್ಮಿಸುವ ಮೂಲಕ ಹೊಂಡವನ್ನು ನಿರ್ಮಿಸಲಾಗಿದೆ. ಬೆಟ್ಟದ ಮೇಲಿಂದ ಬಂದ ನೀರು ವ್ಯರ್ಥವಾಗದಂತೆ ಹೊಂಡ ನಿರ್ಮಿಸಿ ಗಾರೆಯಿಂದ ಗೋಡೆಯನ್ನು ಭದ್ರಪಡಿಸಿಲಾಗಿದೆ. ಸಂಗ್ರಹಿಸಿದ ನೀರನ್ನು ವ್ಯವಸ್ಥಿತವಾಗಿ ಚಿಕ್ಕಕಾಲುವೆ ಮೂಲಕ ಅರಮನೆ ಆವರಣ ಮತ್ತು ವಸತಿ ಪ್ರದೇಶಕ್ಕೆ ಸಾಗಿಸುವ ವ್ಯವಸ್ಥೆ ಇದೆ. ಕಾಲುವೆಯನ್ನು ಬಂಡೆಯ ಮೇಲೆ ಎರಡೂ ಬದಿಗೆ ಕಲ್ಲುಗಳನ್ನಿಟ್ಟು ಗಾರೆಯಿಂದ ಭದ್ರಗೊಳಿಸಲಾಗಿದೆ.

ಇಳಿಜಾರು ಪ್ರದೇಶವಾಗಿರುವುದರಿಂದ ಯಾವುದೇ ಯಂತ್ರ ಶಕ್ತಿ ಇಲ್ಲದೆ ದಿನವಿಡಿ ನೀರನ್ನು ಸಾಗಿಸಬಹುದು. ಪ್ರಮುಖವಾಗಿ ಈ ಹೊಂಡದ ವಿಶೇಷ ಎಂದರೆ, ಹೊಂಡದ ಮುಂಭಾಗದಲ್ಲಿ ಚಿಕ್ಕ ತೊಟ್ಟಿಯನ್ನು ನಿರ್ಮಿಸಿ ಅದರಲ್ಲಿ ಕಲ್ಲು ಮತ್ತು ಮರಳನ್ನು ಹಾಕಿ ನೀರು ಬಸಿದು ಹೋಗುವಂತೆ ಮಾಡಲಾಗಿದೆ. ಎರಡು ಕಾಲುವೆಗಳನ್ನು ಮಾಡಿ ಸಮ ಪ್ರಮಾಣದಲ್ಲಿ ನೀರು ಹರಿಯುವಂತೆ ವ್ಯವಸ್ಥೆ ಮಾಡಲಾಗಿದೆ. ಅದರಲ್ಲೂ ಅರಮನೆ ಪ್ರದೇಶದ ಗೋಡೆಯನ್ನು ಬಂಡೆಯ ಸನಿಹದಲ್ಲಿ ನಿರ್ಮಿಸಿ ನೀರು ನೇರವಾಗಿ ಅರಮನೆಯ ಒಳಗೆ ಹೋಗುವಂತೆ ಮಾಡುವ ಮೂಲಕ ಮತ್ತೊಮ್ಮೆ ಶ್ರಮವನ್ನು ಕಡಿಮೆ ಮಾಡಿಕೊಂಡಿರುವುದು ಕಂಡುಬರುತ್ತಾರೆ. ಇವರು ಅಂದು ಮಾಡಿಕೊಂಡಿರುವ ವ್ಯವಸ್ಥೆ ಇಂದಿನ ಆಧುನಿಕ ಯುಗಕ್ಕೆ ಒಂದು ಪ್ರಾಯೋಗಿಕ ಪಾಠದಂತಿದೆ.

**ಕಣಕುಪ್ಪೆ ಕೋಟೆಯ ದ್ವಾರಗಳು**

ಕೈಫಿಯತ್ತಿನಲ್ಲಿ ಉಲ್ಲೇಖಿಸಿರುವಂತೆ ಹದಿನೆಂಟು ಬಾಗಿಲುಗಳಿವೆ. ಅವುಗಳೆಂದರೆ ಮೇಲುದುರ್ಗದ ಬಾಗಿಲು, ಕುಂಟಜ್ಜಿ ಬಾಗಿಲು, ಹಾಲುಹೊಂಡದ ಬಾಗಿಲು, ಕಲ್ಲುಬಾಗಿಲು, ಏಕನಾಥಿ (ಉಚ್ಚಂಗಿ) ಬಾಗಿಲು, ದೊಡ್ಡಬಾಗಿಲು, ಶಿವಶರಣೆದಾನಸಾಲಮ್ಮನ ಬಾಗಿಲು (ಜಗಲೂರಜ್ಜನ ಮುತ್ತಜ್ಜಿ), ಮನ್ನೇಟೆಗಟ್ಟನ ಬಾಗಿಲು, ಹನುಮನ ಬಾಗಿಲು, ವೀರಭದ್ರನ ಬಾಗಿಲು, ನವಿಲೂರು ಬಾಗಿಲು,

ಜಗಲೂರಜ್ಜನ ಬಾಗಿಲು, ಭೈರವನ ಬಾಗಿಲು, ಆಹೋಬಾಲ ನರಸಿಂಹನ ಬಾಗಿಲು, ಕೋಟೆ ಮಾರಮ್ಮನ ಬಾಗಿಲು, ಕೊದಂಡ ರಾಮನ ಬಾಗಿಲು, ಬಸವನ ಬಾಗಿಲು, ಚೌಡಿ ಬಾಗಿಲು ಕೈಫಿಯತ್ತಿನಲ್ಲಿ ಉಲ್ಲೇಖಿಸಲಾಗಿದೆ ಆದರೆ. ಪ್ರಸ್ತುತ ಕೋಟೆಯೊಳಗೆ ಕೆಲವು ಬಾಗಿಲುಗಳು ಕಂಡುಬರುವುದಿಲ್ಲ.

**ರಂಗಯ್ಯನ ದುರ್ಗದ ಕೋಟೆ**

ರಂಗಯ್ಯನ ದುರ್ಗದ ಕೋಟೆಯು ಜಗಳೂರಿನಿಂದ ಪಶ್ಚಿಮಕ್ಕೆ ಸುಮಾರು ೨೫ ಕಿ.ಮಿ. ದೂರದಲ್ಲಿರುವ ಸಿದ್ದಯ್ಯನಕೋಟೆ ಗ್ರಾಮದಿಂದ ಪೂರ್ವಕ್ಕೆ ೨ ಕಿ.ಮೀ ಅಂತರದಲ್ಲಿದೆ. ಈ ಕೋಟೆಯನ್ನು ನೋಡಿದರೆ ಕಣಕುಪ್ಪೆ ಕೋಟೆ ಕಟ್ಟಿದ ಸಂದರ್ಭದಲ್ಲಿ ಕಟ್ಟಿರಬಹುದು ಎಂದು ಊಹಿಸಲಾಗಿದೆ. ಯಾವುದೇ ಆಧಾರಗಳಿಲ್ಲ ಸ್ಥಳೀಯ ಐತಿಹ್ಯದ ಪ್ರಕಾರ ಇಲ್ಲಿ ರಂಗಪ್ಪ ಎನ್ನುವ ನಾಯಕ ಆಳ್ವಿಕೆ ಮಾಡುತ್ತಿದ್ದ ಆದುದರಿಂದ ಈ ಗುಡ್ಡಕ್ಕೆ ರಂಗಯ್ಯನ ದುರ್ಗ ಎಂದು ಕರೆಯುತ್ತಾರೆ ಎಂದು ಹೇಳುತ್ತಾರೆ.

ಪ್ರಸ್ತುತ ಕೋಟೆಯು ೨೦-೨೫ ಎಕರೆ ವಿಸ್ತರವಾದ ಪ್ರದೇಶದಲ್ಲಿ ಮೂರು ಗುಡ್ಡಗಳಿಗೆ ಹೊಂದಿಕೊಂಡಂತೆ ಕೋಟೆಯನ್ನು ಕಟ್ಟಿದ್ದಾರೆ, ಸ್ಥಳೀಯವಾಗಿ ದೊರೆಯುವ ಕಲ್ಲು ಮಣ್ಣುಗಳನ್ನು ಬಳಸಿಕೊಂಡು ಕಟ್ಟಿದ್ದಾರೆ.

**ಕೋಟೆಯೊಳಗಿನ ಅವಶೇಷಗಳು**

ಕೋಟೆಯೊಳಗೆ ಜನವಸತಿಯ ಕುರುಹಾಗಿ ಮನೆಗಳ ಪಾಯಗಳು, ಮಡಕೆ, ಕುಡುಕೆಗಳು, ಒಂದು ಚಿಕ್ಕ ಆಂಜನೇಯ ಗುಡಿ ಮತ್ತು ಚೌಡಮ್ಮನ ಗುಡಿಗಳಿವೆ, ಉತ್ತರದ ಗುಡ್ಡದಲ್ಲಿ ಒಂದು ನೈಸರ್ಗಿಕ ಹೊಂಡ ಹಾಗೂ ನಿರ್ಮಿತ ಹೊಂಡಗಳಿವೆ, ಆಯಕಟ್ಟಿನ ಪ್ರದೇಶಗಳಲ್ಲಿ ೨೦x೨೦ ಅಡಿ ವಿಸ್ತೀರ್ಣದ ಬುರುಜುಗಳಿವೆ.

**ಕೋಟೆಯ ಗೋಡೆ**

ಕೋಟೆ ಗೋಡೆಯನ್ನು ರಕ್ಷಣಾತ್ಮಕವಾಗಿ ಗೊಡೇಯನ್ನು ನಿರ್ಮಿಸಿದ್ದಾರೆ. ಗೋಡೆಯಲ್ಲಿ ಬಂದೂಕು ಕಿಂಡಿಗಳಿವೆ. ದ್ವಾರಬಾಗಿಲ ಬಳಿ ಗೋಡೆಯು ೫ ಅಡಿ ವಿಸ್ತೀರ್ಣದ ರಕ್ಷಣಾತ್ಮಕ ಗೋಡೆಯನ್ನು ನಿರ್ಮಿಸಿ ಸುಮಾರು ೩೫೦ ಮೀಟರ್ ಅಳತೆಯಲ್ಲಿ ಕಟ್ಟಿದ್ದಾರೆ, ಉಳಿದಂತೆ ಸುತ್ತಲು ಕೋಟೆ ಗೋಡೆ ೩ ಅಡಿ ರಕ್ಷಣಾತ್ಮಕ ಗೋಡೆ ೪ ಅಡಿ ವಿಸ್ತೀರ್ಣದಲ್ಲಿದೆ. ಕೋಟೆಯ ಸುತ್ತಲೂ ಐದು ಬುರುಜುಗಳಿವೆ.

**ಕೊತ್ತಲುಗಳು**

ಕೊತ್ತಲ ಕೋಟೆಯ ಮೇಲ್ಭಾಗದಲ್ಲಿ ಸೈನಿಕರು ನಿಂತು ಕಾಯುವ ಎತ್ತರ ಪ್ರದೇಶವಾಗಿದೆ. ಕೊತ್ತಲಕ್ಕೆ ಬುರುಜು, ಕೊತ್ತಳ, ಕೊತ್ತಲ ಮತ್ತು ಕಾವಲುಗೋಪುರವೆಂತಲೂ ಕರೆಯುತ್ತಾರೆ. ಕೋಟೆ

ವದದೊಂದಿಗೆ ಕೊತ್ತಲವು ಸೇರಿಕೊಂಡಿದೆ. ಕಣಕುಪ್ಪೆ ಪ್ರದೇಶದಲ್ಲಿ ಅನೇಕ ಕೊತ್ತಲಗಳಿವೆ. ಕೊತ್ತಲಗಳನ್ನು ಗ್ರಾಮದ ರಕ್ಷಣೆಗಾಗಿ ನಿರ್ಮಿಸುತ್ತಿದ್ದರು. ಯುದ್ಧ ನಡೆಯುವ ಸನ್ನಿವೇಶದಲ್ಲಿ ಇವು ಆಯಕಟ್ಟಿನ ರಚನೆ ಆಗಿದ್ದರಿಂದ ಹಾಗೂ ಎತ್ತರವಾದ ಸ್ಥಳದಲ್ಲಿ ನಿರ್ಮಿತವಾಗಿರುವುದರಿಂದ ಶತ್ರುವಿನ ವಿರುದ್ಧ ಸಹಜವಾಗಿಯೇ ಹೋರಾಡಬಹುದು ಮತ್ತು ಪ್ರಕೃತಿ ರಕ್ಷಣೆ, ಕಳ್ಳರ ರಕ್ಷಣೆಯಿಂದ ಕೋಟೆಯೊಳಗಿಂದಲೇ ಕಾವಾಡಬಹುದಾಗಿತ್ತು.

ಕಣಕುಪ್ಪೆ ಕೋಟೆಯೊಳಗೆ ಈ ರೀತಿಯ ಕೊತ್ತಲಗಳನ್ನು ನಾವು ಕೋಟೆಯ ಸುತ್ತಲೂ ಆಯಕಟ್ಟಿನ ಸ್ಥಳಗಳಲ್ಲಿ ಕಾಣುತ್ತವೆ. ಕೊತ್ತಲಗಳ ಮೇಲೆ ನಿಂತು ಸೈನಿಕರು ವಿರೋಧಿ ಪಡೆಯವರನ್ನು ನೋಡುವುದಕ್ಕೂ ಕಾದಾಡುವುದು, ಹಾಗೂ ರಕ್ಷಣೆ ಪಡೆಯುತ್ತಿದ್ದರು, ಅದೇ ರೀತಿ ದುಗಯ್ಯನ ರಂಗಯ್ಯನ ಕೋಟೆಯ ಮೇಲೆ ೫ ಕೊತ್ತಲಗಳನ್ನು ಕಾಣುತ್ತೇವೆ.

ಜಗಳೂರಿನಿಂದ ಉತ್ತರಕ್ಕೆ ಸುಮಾರ ೧೬ ಕಿ.ಮೀ ಅಂತರದಲ್ಲಿ ದೊಡ್ಡ ಬೋಮ್ಮನಹಳ್ಳಿ ಗ್ರಾಮವಿದೆ. ಕಣಕುಪ್ಪೆಕೋಟೆ ಕಟ್ಟುವ ಸಂದರ್ಭದಲ್ಲಿ ಗುಡ್ಡದ ಕಾವಲಿಗೆ ಒಂದು ಕೊತ್ತಲನ್ನು ಕಟ್ಟಿಸಿ ಐವತ್ತು ಮಂದಿ ಕಾವಲುಗಾರನನ್ನು ನೇಮಿಸಿ ಅದಕ್ಕೆ ಹಿರೇಬೋಮ್ಮಯ್ಯ ಎನ್ನುವ ಗುರಿಕಾರನನ್ನು ನೇಮಿಸಿದರು. ೩೦ ಅಡಿ ಎತ್ತರ ೬೦-೭೦ ಅಡಿ ವಿಸ್ತಾರವಾಗಿದೆ."

## ದೇವಾಲಯಗಳು

ಅಲೆಮಾರಿಯಾಗಿದ್ದ ಮಾನವ ಒಂದು ಕಡೆ ನೆಲೆಯಾಗಿ ನಿಲ್ಲಬೇಕೆಂದು ಒಂದು ಸುರಕ್ಷಿತ ಗೂಡಿನಲ್ಲಿ ವಾಸಿಸಬೇಕೆಂದು ಎಂದಿನಿಂದ ಬಯಸಿದನೋ ಅಂದಿನಿಂದ ತನಗಾಗಿ ಮನೆಯನ್ನು ಕಟ್ಟಿಕೊಳ್ಳಲು ಪ್ರಾರಂಭಿಸಿದ ಇದು ವಾಸ್ತು ಶಿಲ್ಪದ ಪ್ರಥಮ ಹೆಜ್ಜೆಯೆಯಿತು. ಸುತ್ತಲಿರುವ ಪ್ರಕೃತಿಯ ಬಗ್ಗೆ ಮಾನವನಿಗೆ ಭಯ ಭಕ್ತಿಗಳು ಮೂಡಿದವು. ಈ ದೃಷ್ಟಿಯಿಂದ ಪ್ರಕೃತಿಯ ಎಲ್ಲಾ ವಸ್ತುಗಳು ಪೂಜ್ಯಾರ್ಹವಾದವು. ಈ ಕಾರಣದಿಂದಲೇ ಗಿಡ, ಮರ, ನದಿ ಇತ್ಯಾದಿಗಳು ಅವನಿಗೆ ಪೂಜ್ಯ ಸ್ಥಾನಗಳು ಆದವು, ಇನ್ನೂ ಮುಂದುವರೆದು ಈ ಎಲ್ಲಾ ಸೃಷ್ಟಿಯ ಹಿನ್ನೆಲೆಯಾಗಿ ನಿಂತು ತನ್ನನ್ನು ನಡೆಸುತ್ತಿರುವ ಯಾವುದೊ ಒಂದು ಅನಂತ ಶಕ್ತಿ ಇದೆ ಎಂದು ಅರಿವುಂಟಾದಾಗ ಆ ಶಕ್ತಿಗೆ ಒಂದು ರೂಪ ಕೊಡಲು ಯತ್ನಿಸಿದ. ಹೀಗೆ ನೀಡಿದ ಒಂದು ರೂಪಕ್ಕೆ ಅಥವಾ ಸಂಕೇತಕ್ಕೆ ರಕ್ಷಣಾತ್ಮಕವಾಗಿ ಪ್ರತ್ಯೇಕ ಆಲಯವನ್ನು ಕಟ್ಟಲು ಪ್ರಾರಂಭಿಸಿದ ಇದೆ. ದೇವಾಲಯದ ರಚನೆಗೆ ನಾಂಧಿಯಾಯಿತು. ಕಣಕುಪ್ಪೆ ಪರಿಸರದಲ್ಲಿ ಕಂಡು ಬರುವ ಪ್ರಮುಖ ದೇವಾಲಯಗಳನ್ನು ಈ ಕೆಳಗಿನಂತೆ ಅಧ್ಯಯನ ಮಾಡಲಾಗಿದೆ.

ಕಣಕುಪ್ಪೆಯಿಂದ ಸುಮಾರು ೨೨ ಕಿ.ಮೀ. ದೂರದಲ್ಲಿರುವ ಈಶ್ವರ ದೇವಾಲಯವು ಬಿಳಿಚೋಡು ಗ್ರಾಮದ ಮಧ್ಯದಲ್ಲಿದೆ ಕ್ರಿ.ಶ. ೧೦-೧೧ನೇ ಶತಮಾನ ಈ ದೇವಾಲಯವು ಪೂರ್ವಾಭಿಮುಖವಾಗಿದ್ದು. ಹೊರಗಿನಿಂದ ನೋಡಿದರೆ ಬುರುಜು ಎನ್ನುವಂತೆ ಕಾಣುತ್ತದೆ. ಚೌಕಾಕಾರದ ಗರ್ಭಗೃಹದ ಪೀಠದ ಮೇಲೆ ಶಿವಲಿಂಗವನ್ನು ಪ್ರತಿಷ್ಠಾಪಿಸಲಾಗಿದೆ. ಲಿಂಗದ ಎದುರಿಗೆ ನಂದಿ ಇದೆ. ಬಹುಶಃ ಈ ನಂದಿಯನ್ನು

ನಂತರದ ದಿನಗಳಲ್ಲಿ ತಂದಿಟ್ಟಿರುವ ಸಾಧ್ಯತೆ ಇದೆ. ಗರ್ಭಗೃಹದಲ್ಲಿ ಇತರೆ ಯಾವುದೇ ಶಿಲ್ಪಗಳನ್ನು ಕಾಣುವುದಿಲ್ಲ.

ಗರ್ಭಗೃಹಕ್ಕೆ ಹೊಂದಿಕೊಂಡಂತೆ ಮುಂಭಾಗದಲ್ಲಿ ತೆರೆದ ಅಂತರಾಳ ಕಂಡುಬರುತ್ತದೆ. ಅಂತರಾಳದ ಮುಂಭಾಗದಲ್ಲಿ ನವರಂಗವಿದೆ. ನವರಂಗದ ನಾಲ್ಕು ಕಲ್ಯಾಣಿ ಚಾಲುಕ್ಯ ಶೈಲಿಯ ನಾಲ್ಕು ಕಂಬಗಳು, ಭಿತ್ತಿಯಲ್ಲಿ ಹನ್ನೆರಡು ಅರೆಗಂಭಗಳನ್ನು ನೋಡಬಹುದು. ನವರಂಗದ ಕಂಬಗಳು ಚೌಕಾಕಾರವಾದ ಪೀಠ ಅದರಲ್ಲಿ ವಿವಿಧ ದೇವದೇವತೆಯರ ಉಬ್ಬು ಶಿಲ್ಪಗಳಿವೆ. ಪಾದವು ಚೌಕಾಕಾರವಾಗಿದ್ದು, ಬಹುಮುಖ ಕಳಸ, ಅಭ್ಯಾಕಸ್, ಗ್ರೀವ, ಬೋಧಿಗಳನ್ನು ಒಳಗೊಂಡಿದೆ. ಈ ಕಂಬಗಳ ಕಪ್ಪು ಶಿಲೆಯಲ್ಲಿವೆ. ಈ ರೀತಿಯ ಕಂಬಗಳನ್ನು ನಾವು ಅಸಗೋಡಿನ ಶಂಭುಲಿಂಗೇಶ್ವರ ದೇವಾಲಯದಲ್ಲಿ ಕಾಣುತ್ತೇವೆ. ಬಾಗಿಲುವಾಡದ ಮುಂದೆ ನಾಲ್ಕು ವೃತ್ತಾಕಾರವಾದ ನೀಳವಾದ ಕಂಬಗಳನ್ನು ಕಾಣುತ್ತೇವೆ. ಈ ಕಂಬದಲ್ಲಿ ಚೌಕಾಕಾರವಾದ ಪೀಠ, ಪಾದ, ವೃತ್ತಾಕಾರದ ದಿಂಡು, ಕಳಸ, ಅಭ್ಯಾಕಸ್, ಬೋಧಿಗಳನ್ನು ಒಳಗೊಂಡಿದೆ. ಈ ರೀತಿಯ ಕಂಬಗಳನ್ನು ಬಸವನಬಾಗೇವಾಡಿಯ ಬಸವೇಶ್ವರ ದೇವಾಲಯದಲ್ಲಿ ಹಾಗೂ ಚಳ್ಳಕೆರೆ ತಾಲ್ಲೂಕಿನ ಗೋಸಿಕೆರೆಯ ಸಾರ್ವಡೇಶ್ವರ ದೇವಾಲಯದಲ್ಲಿ ಕಾಣಬಹುದು. ನವರಂಗದ ಭುವನೇಶ್ವರಿಯಲ್ಲಿ ವೃತ್ತಾಕಾರದ ಹಲವು ವೃತ್ತಗಳನ್ನು ಕಾಣಬಹುದು. ಈ ರೀತಿಯ ಭುವನೇಶ್ವರಿಯನ್ನು ನಾವು ಲಕ್ಷ್ಮೀಶ್ವರದ ದೇವಾಲಯದಲ್ಲಿ ನೋಡುತ್ತವೆ. ಹೊರಗಿನ ಬಾಗಿಲುವಾಡದ ಭುವನೇಶ್ವರಿಯಲ್ಲಿ ವೃತ್ತಾಕಾರದ ಪದ್ಮವನ್ನು ಕಾಣುತ್ತೇವೆ.

ಪ್ರವೇಶದ್ವಾರದ ಬಾಗಿಲುವಾಡದ ಲಲಾಟದಲ್ಲಿ ನಾವು ಅಲಂಕೃತವಾದ ಗಜಲಕ್ಷ್ಮೀ ಶಿಲ್ಪ ಕಂಡುಬರುತ್ತದೆ. ಎರಡು ಆನೆಗಳು ಲಕ್ಷ್ಮೀದೇವಿಗೆ ಹೂವಿನ ಹಾರ ಹಾಕುತ್ತಿರುವ ದೃಶ್ಯ, ಲಕ್ಷ್ಮೀಯು ಪೀಠದ ಮೇಲೆ ವಿವಿಧ ಆಭರಣಗಳ ಅಲಂಕಾರದೊಂದಿಗೆ ಕುಳಿತಿರುವಳು. ಲಲಾಟದ ಮೇಲಿನ ಭಾಗದಲ್ಲಿ ನಾಲ್ಕು ರತ್ನ ಪಟ್ಟಿಕೆಗಳನ್ನು ಅದರ ನಡುವೆ ಒಂದು ಶಿಲ್ಪವನ್ನು ಕಾಣುತ್ತೇವೆ. ಅದರ ಮೇಲೆ ಪುರಾಣ ಕಥೆಗಳನ್ನು ಹೇಳುವ ಶಿಲ್ಪಗಳನ್ನು ಖಂಡರಿಸಲಾಗಿದೆ. ಈ ಎಲ್ಲಾ ಶಿಲ್ಪಗಳು ನಗ್ನವಾಗಿವೆ. ಬಾಗಿಲುವಾಡದ ಶಾಖೆಯಲ್ಲಿ ಪಂಚ ಶಾಖೆಗಳನ್ನು ಕಾಣುತ್ತೇವೆ. ಲತೆ, ಬಳ್ಳಿ, ಸ್ತಂಭ, ವ್ಯಾಳ ಅರೆಗಂಬ ಶಾಖೆ, ಮಧ್ಯಭಾಗದಲ್ಲಿ ದ್ವಾರಪಾಲಕರ ಶಿಲ್ಪಗಳಿವೆ. ಪ್ರವೇಶದಲ್ಲಿ ತಾಳವಾರವನ್ನು ಕಾಣುತ್ತೇವೆ.

ಇಡೀ ದೇವಾಲಯ ಅಧಿಷ್ಠಾನದ ಮೇಲೆ ನಿರ್ಮಾಣವಾಗಿದೆ. ಅಧಿಷ್ಠಾನದಲ್ಲಿ ವಿವಿಧ ಪಟ್ಟಿಕೆಗಳಿವೆ. ಇಡೀ ದೇವಾಲಯವನ್ನು ಒಂದು ಬುರುಜು ರೀತಿ ಕಲ್ಲಿನಲ್ಲಿ ಮುಚ್ಚಲಾಗಿದೆ. ಧಾಳಿಕಾರರ ಹಾವಳಿಯಿಂದ ರಕ್ಷಿಸಲು ಈ ರೀತಿ ಮುಚ್ಚಲಾಗಿದೆ ಎಂಬ ಅನುಮಾನ ಬರುತ್ತದೆ. ದೇವಾಲಯದ ದಕ್ಷಿಣ ಮತ್ತು ಆಗ್ನೇಯ ಭಾಗದಲ್ಲಿ ಸ್ವಲ್ಪ ಅಧಿಷ್ಠಾನ ಕಾಣುತ್ತದೆ. ಗರ್ಭಗೃಹದ ಎದುರಿಗೆ ಒಂದು ಬಾವಿ ಇತ್ತು ಅದನ್ನು ಮುಚ್ಚಲಾಗಿದೆ ಎಂದು ಸ್ಥಳೀಯರಿಂದ ತಿಳಿದುಬರುತ್ತದೆ.

ಕ್ರಿ.ಶ. ಸುಮಾರು ೧೧ನೇ ಶತಮಾನದ ಕಲ್ಲೇಶ್ವರ ದೇವಾಲಯವು ಚದುರುಗೋಳ ಗ್ರಾಮದ ಈಶಾನ್ಯ ಭಾಗದ ಕೆರೆಯ ಹಿಂಭಾಗದಲ್ಲಿದೆ. ದೇವಾಲಯವು ಪೂರ್ವಾಭಿಮುಖವಾಗಿದ್ದು, ಕಣಕುಪ್ಪೆಯಿಂದ

೧೮ ಕಿ.ಮಿ.ದೂರದಲ್ಲಿದೆ. ಗರ್ಭಗುಡಿ ಮತ್ತು ಅಂತರಾಳ ಮಾತ್ರ ಇದೆ. ದೇವಾಲಯದ ಮುಂದಿನ ಭಾಗ ನಶಿಸಿಹೋಗಿದೆ.

ದೇವಾಲಯದ ಹೊರ ಭಾಗದ ಅಧಿಷ್ಠಾನವು ವಿಧಾನ, ಪದ್ಮ, ಕಪೋತ ವೇದಿಕೆಗಳಿಂದ ಕೂಡಿದೆ. ಭಿತ್ತಿಯು ಅರೆಗಂಬಗಳ ಅಲಂಕಾರದಿಂದ ಇದೆ. ಕೋಷ್ಠ ಪಂಜರಗಳ ಮೇಲೆ ವೇಸರ ಮತ್ತು ನಾಗರ ಶೈಲಿಯ ಶಿಖರಗಳನ್ನು ಪಂಜರಗಳ ಮಧ್ಯೆ ಪದ್ಮಗಳನ್ನು ಕೆತ್ತಲಾಗಿದೆ. ಪ್ರಸ್ತರದಲ್ಲಿ ಕಪೋತ ಭಾಗವು ಸರಳವಾಗಿದ್ದು ಅಲ್ಲಲ್ಲಿ ಬಿದ್ದಿದೆ.

ಗರ್ಭಗುಡಿಯಲ್ಲಿ ಮೂಲತಃ ಪಾಣಿಪೀಠದ ಜೊತೆಗೆ ಇದ್ದ ಲಿಂಗವನ್ನು ಕಿತ್ತು ಅಲ್ಲಿಯೇ ಇಡಲಾಗಿದೆ. ಗರ್ಭಗುಡಿಯ ಮುಚ್ಚಿಗೆಯಲ್ಲಿ ಅರಳಿದ ಪದ್ಮವಿದ್ದು, ಇದರ ದ್ವಾರವು ಸರಳವಾಗಿದೆ. ಇಲ್ಲಿ ದ್ವಾರಪಾಲಕರಾಗಲಿ ಲಲಾಟ ಬಿಂಬವಾಗಲಿ ಕಾಣುವುದಿಲ್ಲ. ಅಂತರಾಳದಲ್ಲಿ ಯಾವುದೇ ಮೂರ್ತಿಗಳಿಲ್ಲ ಇದರ ಮುಚ್ಚಿಗೆಯಲ್ಲಿ ಅರಳಿದ ಪದ್ಮವಿದೆ. ಇದರ ದ್ವಾರವು ಸಾಮಾನ್ಯವಾಗಿದೆ. ಅಂತರಾಳದ ಭಾಗವು ನಾಶವಾಗಿದ್ದು ಅಲ್ಲಿನ ಕುರುಹುಗಳಿಂದ ನವರಂಗವಿತ್ತೆಂದು ಹೇಳಬಹುದು. ದೇವಾಲಯದ ವಾಸ್ತು ಲಕ್ಷಣಗಳ ಆಧಾರದ ಮೇಲೆ ಕಲ್ಯಾಣಿ ಚಾಲುಕ್ಯರ ಕಾಲದ್ದೆಂದು ಹೇಳಬಹುದು. ಇಲ್ಲಿ ಕ್ರಿ.ಶ.೧೦೮೨ ಹಾಗೂ ೧೦೮೭ ಕಾಲದ ಎರಡು ಶಾಸನಗಳು ಕ್ರಿ.ಶ. ೧೦೮೭ರ ಶಾಸನವು ಭರ್ಮ ದೇವ ನಾಯಕನು ಶ್ರೀ ತೇಜೋನಿಧಿ ಪಂಡಿತ ದೇವರ ಮಗ ಸರ್ವೇಶ ಪಂಡಿತರಿಗೆ ಕಲ್ಲೇಶ್ವರ ಸ್ವಾಮಿಯ ಅಮೃತ ಪಡಿಗೆ ಹರಕೆಗೆ ಹೊಲಗಳನ್ನು ದಾನ ಬಿಟ್ಟ ಬಗ್ಗೆ ಉಲ್ಲೇಖವಿದೆ.[೬]

ಅಸಗೋಡು ಕೆರೆ ಏರಿಯ ಪಕ್ಕದಲ್ಲಿರುವ ಶಂಭುಲಿಂಗೇಶ್ವರ ದೇವಾಲಯವು ಕಣಕುಪ್ಪೆಯಿಂದ ಸು.೧೯ ಕಿ.ಮಿ.ದೂರದಲ್ಲಿದೆ. ಕ್ರಿ.ಶ.೧೨-೧೩ನೇ ಶತಮಾನದ ಈ ದೇವಾಲಯಕ್ಕೆ ಐತಿಹಾಸಿಕ ಹಿನ್ನೆಲೆಯಿರುವುದನ್ನು ಶಿಲಾಶಾಸನಗಳ ಮುಖಾಂತರ ತಿಳಿದುಕೊಳ್ಳಬಹುದು. ಒಂದು ಶಾಸನದಲ್ಲಿ "ಕಾಳ ಮುಖ ಸ್ಥಾನಂ ನೈಷ್ಟಿಕ ವೇದಿಕರ್ತಾರ ಮಠ"[೭] ಎಂದು ಉಲ್ಲೇಖಿಸಿದೆ. ದೇವಾಲಯವು ದಕ್ಷಿಣಾಭಿಮುಖವಾಗಿದ್ದು. ತಳವಿನ್ಯಾಸದಲ್ಲಿ ಗರ್ಭಗೃಹ, ತೆರೆದ ಅಂತರಾಳ ನವರಂಗಗಳನ್ನು ಹೊಂದಿದೆ. ಗರ್ಭಗೃಹವು ಚೌಕಾಕಾರವಾಗಿದ್ದು ಮಧ್ಯದಲ್ಲಿ ಶಿವಲಿಂಗವನ್ನು ಪ್ರತಿಷ್ಠಾಪಿಸಲಾಗಿದೆ. ಉತಾನದಲ್ಲಿ ಮುಗುಚಿದ ಕಮಲವಿದೆ. ಪ್ರವೇಶದ್ವಾರವು ಅನೇಕ ಶಾಖೆಗಳಿಂದ ಕೂಡಿದ್ದು ಸರಳವಾಗಿದೆ. ಗರ್ಭಗೃಹಕ್ಕೆ ಹೊಂದಿಕೊಂಡಂತೆ ತೆರೆದ ಅಂತರಾಳವಿದೆ. ಅಂತರಾಳದಲ್ಲಿ ಯಾವುದೇ ಶಿಲ್ಪಗಳಿಲ್ಲ. ನವರಂಗದಲ್ಲಿ ನಾಲ್ಕು ಕಂಬಗಳಿದ್ದು, ಅವು ಪೀಠ, ಚೌಕಾಕಾರದ ಪಾದ, ಬಹುಮುಖದಿಂದು ಚೌಕ, ಕಳಸ, ಅಭ್ಯಾಕಸ್, ಗ್ರೀವ, ಬೋಧಿಗಗಳನ್ನು ಒಳಗೊಂಡಿವೆ. ಕಳಸದ ಕೆಳಗೆ ರತ್ನಪಟ್ಟಿಕೆಗಳಿವೆ. ಕಂಬದಲ್ಲಿ ಮತ್ತಾವುದೇ ಶಿಲ್ಪಗಳಿಲ್ಲ. ಇದೇ ಮಾದರಿಯ ಕಂಬಗಳನ್ನು ಸ್ಥಳೀಯ ಕಡ್ಲೆಬಸಪ್ಪ ದೇವಾಲಯದಲ್ಲಿ ಕಾಣುತ್ತೇವೆ. ನವರಂಗದ ಭಿತ್ತಿಯಲ್ಲಿ ಹನ್ನೆರಡು ಅರೆಗಂಬ ಮತ್ತು ಪಶ್ಚಿಮ ಭಿತ್ತಿಯಲ್ಲಿ ಗುಂಡಯ್ಯ ಬ್ರಹ್ಮಯ್ಯರ ಉಬ್ಬುಕೆತ್ತನೆಯ ಶಿಲ್ಪವನ್ನು ನೋಡುತ್ತೇವೆ. ನವರಂಗದ ಮಧ್ಯೆ ನಾಟ್ಯವೇದಿಕೆ ಹಾಗೂ

ಭುವನೇಶ್ವರಿಯಲ್ಲಿ ಪದ್ಮದ ಅಲಂಕರಣೆ ಇದೆ. ಬಾಗಿಲುವಾಡ ಪಂಚಶಾಖೆಗಳಿಂದ ಕೂಡಿದ್ದು. ಗರ್ಭಗೃಹದ ಬಾಗಿಲುವಾಡದ ಪೇದ್ಯಭಾಗದಲ್ಲಿ ಶಿಲ್ಪಗಳನ್ನು ಖಂಡರಿಸಲು ಸ್ಥಳಾವಕಾಶ ಬಿಟ್ಟಿರುವುದನ್ನು ಕಾಣಬಹುದು. ಆದರೆ ಯಾವುದೇ ಶಿಲ್ಪಗಳಿಲ್ಲ. ಈ ದೇವಾಲಯದ ಶಿಖರವನ್ನು ಗ್ರಾಮದ ಭಕ್ತರು ಹೊಸದಾಗಿ ನಿರ್ಮಿಸಿದ್ದಾರೆ.

ನವರಂಗಕ್ಕೆ ಹೊಂದಿಕೊಂಡಂತೆ ಪಶ್ಚಿಮಕ್ಕೆ ಇನ್ನೊಂದು ಗರ್ಭಗೃಹವನ್ನು ನೋಡಬಹುದು. ಇದನ್ನು ಅನಂತರರಲ್ಲಿ ನಂತರದ ನಿರ್ಮಿಸಲಾಗಿದೆ. ಇಲ್ಲಿ ಗರ್ಭಗೃಹದ ಮಧ್ಯ ಶಿವಲಿಂಗವಿದೆ. ಅಂತರಾಳದಲ್ಲಿ ಯಾವುದೇ ಶಿಲ್ಪಗಳಿಲ್ಲ ಈ ದೇವಾಲಯವನ್ನು ನೋಡಿದ ತಕ್ಷಣ ದ್ವಿಕೂಟ ಮಾದರಿಯ ದೇವಾಲಯದ ರೀತಿ ಕಾಣುತ್ತದೆ. ಆದರೆ ಮುಂದಿನ ದೇವಾಲಯ ನಂತರದಲ್ಲಿ ನಿರ್ಮಿಸಲಾಗಿದೆ. ಈ ಎರಡೂ ಗರ್ಭಗೃಹಗಳಿಗೆ ಒಂದೇ ಪ್ರವೇಶದ್ವಾರವಿದೆ. ಶಂಭುಲಿಂಗೇಶ್ವರ ದೇವಾಲಯದ ಪಕ್ಕ ಸೋಮಸೂತ್ರವಿದೆ ಅದರಿಂದ ಬಂದಂತಹ ನೀರು ತೊಟ್ಟಿಯಲ್ಲಿ ಬೀಳುವಂತೆ ಮಾಡಿದ್ದಾರೆ. ಈ ದೇವಾಲಯವು ಜಗಳೂರು ತಾಲ್ಲೂಕಿನ ಇತಿಹಾಸ ರಚನೆಯಲ್ಲಿ ಪ್ರಮುಖ ಪಾತ್ರವಹಿಸಿದೆ. ಈ ದೇವಾಲಯವನ್ನು "ರವುಡಿಗ ಮಂಜ್ಯೋಜನ ಮಗ ಅಬ್ಯೋಜನು ಕಟ್ಟಿಸಿದನು"[೨] ಎಂದು ಶಾಸನದ ಮುಖಾಂತರ ತಿಳಿಯುತ್ತದೆ.

ಕೊಡದ ಗುಡ್ಡದ ಕೆರೆ ಏರಿಯ ಹಿಂದಿರುವ ಈಶ್ವರ ದೇವಾಲಯವು ಕಣಕುಪ್ಪೆಯಿಂದ ಸು. ೭ ಕಿ.ಮಿ ಅಂತರದಲ್ಲಿದೆ. ಕ್ರಿ.ಶ.೧೨-೧೩ನೇ ಶತಮಾನದ ಇದು ಪೂರ್ವಾಭಿಮುಖವಾಗಿದ್ದು ತಳವಿನ್ಯಾಸದಲ್ಲಿ ಗರ್ಭಗೃಹ, ಅಂತರಾಳ, ನವರಂಗಳನ್ನು ಒಳಗೊಂಡಿದೆ, ಗರ್ಭಗೃಹವು ಚೌಕಾಕಾರವಾಗಿದ್ದು, ಮಧ್ಯಪೀಠದ ಮೇಲೆ ಶಿವಲಿಂಗವನ್ನು ಪ್ರತಿಷ್ಠಾಪಿಸಲಾಗಿದೆ, ಗರ್ಭಗೃಹಕ್ಕೆ ಹೊಂದಿಕೊಂಡಂತೆ ತೆರೆದ ಅಂತರಾಳವಿದೆ. ಅದರಲ್ಲಿ ಯಾವುದೇ ಶಿಲ್ಪಗಳಿಲ್ಲ ನವರಂಗದ ಮಧ್ಯೆ ನಾಲ್ಕು ಕಂಬಗಳಿದ್ದು ಮಧ್ಯ ನಂದಿಯಿದೆ. ಕಂಬಗಳು ಚೌಕಾಕಾರದ ಪೀಠ, ಪಾದ, ಅಷ್ಟಮುಖದಿಂಡು, ಚೌಕ, ಕಳಸ, ಅಬ್ಯಾಕಸ್, ಗ್ರೀವ, ಬೋಧಿಗಳನ್ನು ಒಳಗೊಂಡ. ಈ ಕಂಬದ ಲಕ್ಷಣಗಳ ಮೇಲೆ ಕಲ್ಯಾಣಿ ಚಾಲುಕ್ಯರ ಕಾಲದವು ಎಂದು ಊಹಿಸಬಹುದು.

ದೇವಾಲಯದ ಎದುರಿಗೆ ಒಂದು ಚಿಕ್ಕದಾದ ಸೂರ್ಯದೇವನಿಗಾಗಿ ನಿರ್ಮಿಸಿದ ಒಂದು ಗುಡಿಯನ್ನು ಕಾಣುತ್ತೇವೆ. ಅದರಲ್ಲಿ ಸೂರ್ಯ ಶಿಲ್ಪವನ್ನು ಪ್ರತಿಷ್ಠಾಪಿಸಲಾಗಿದೆ.

ಕೆಲವು ಕಡೆ ಶೈವ ದೇವಾಲಯಗಳ ಎದುರಿಗೆ ಈ ರೀತಿ ಸೂರ್ಯನಿಗಾಗಿ ನಿರ್ಮಿಸಿದ ಗುಡಿಗಳನ್ನು ಕಾಣುತ್ತೇವೆ. ಉದಾ: ಲಕ್ಕುಂಡಿಯ ಕಾಶಿವಿಶ್ವನಾಥ ದೇವಾಲಯ, ಬಾಗಳಿಯ ಕಲ್ಲೇಶ್ವರ ದೇವಾಲಯ ಮುಂತಾದ ಕಡೆ ಕಾಣಬಹುದು. ದೇವಾಲಯದ ಭಿತ್ತಿಯನ್ನು ಗಮನಿಸಿದರೆ ಇಟ್ಟಿಗೆ ಮಣ್ಣುಗಳಿಂದ ಮಾಡಲಾಗಿದೆ. ಕಂಬಗಳು ಚಾಲುಕ್ಯರ ಶೈಲಿ ಆದುದರಿಂದ ನಂತರದ ಕಾಲದಲ್ಲಿ ಜೀರ್ಣೋದ್ಧಾರ ಮಾಡಿರಬಹುದು. ಈ ದೇವಾಲಯದ ಸಂರಕ್ಷಣೆ ದೃಷ್ಟಿಯಿಂದ ಸಂಪೂರ್ಣವಾಗಿ ಮುಚ್ಚಿದ್ದಾರೆ. ದೂರದಿಂದ ನೋಡಿದರೆ ಒಂದು ಮಣ್ಣು ಗುಡ್ಡೆಯಂತೆ ಕಾಣಿಸುತ್ತದೆ.

ಅಸಗೋಡು ಕೆರೆ ಏರಿಯ ಪಕ್ಕದಲ್ಲಿರುವ ಕಡ್ಲೆ ಬಸಪ್ಪ ದೇವಾಲಯವು ಕ್ರಿ.ಶ.ಸು.೧೨-೧೩ನೇ ಶತಮಾನ ಕಣಕುಪ್ಪೆಯಿಂದ ೧೯ ಕಿ.ಮಿ. ದೂರದಲ್ಲಿರುದೆ. ದೇವಾಲಯವು ದಕ್ಷಿಣಾಭಿಮುಖವಾಗಿದ್ದು, ತ್ರಿಕೂಟ ದೇವಾಲಯದ ಮಾದರಿಯಲ್ಲಿದೆ. ಚೌಕಾಕಾರದ ಗರ್ಭಗೃಹ ಅದರಲ್ಲಿ ನಂದಿ ಶಿಲ್ಪವಿದೆ. ಆದುದರಿಂದ ಕಡ್ಲೆಬಸಪ್ಪ ದೇವಾಲಯ ಎನ್ನುವರು. ವಿತಾನದಲ್ಲಿ ಮಗುಚಿದ ಕಮಲವಿದೆ. ಪ್ರವೇಶದ್ವಾರವು ಸರಳ ಶಾಖೆಗಳಿಂದ ಕೂಡಿದೆ. ಮೂರು ಗರ್ಭಗುಡಿಗಳನ್ನು ಹೊಂದಿದ್ದು ಅವುಗಳಿಗೆ ಹೊಂದಿಕೊಂಡಂತೆ ತೆರೆದ ಅಂತರಾಳಗಳಿವೆ. ಅವುಗಳಿಗೆ ಹೊಂದಿಕೊಂಡಂತೆ ನವರಂಗವಿದೆ. ನವರಂಗದಲ್ಲಿ ನಾಲ್ಕು ಕಂಬಗಳು, ಭಿತ್ತಿಯಲ್ಲಿ ಹನ್ನೆರಡು ಅರಗಂಬಗಳನ್ನು ಕಾಣುತ್ತೇವೆ. ಕಂಬಗಳು, ಪೀಠ, ಪಾದ, ಚೌಕ, ಬಹುಮುಖದಿಂಡು, ಕಳಸ, ಬೋಧಿಗೆಯನ್ನು ನೋಡಬಹುದು. ಬಹುಮುಖ ದಿಂಡಿನಲ್ಲಿ ರತ್ನ ಪಟ್ಟಿಕೆಗಳಿವೆ. ಕಂಬದ ಮೇಲ್ಭಾಗದಲ್ಲಿ ಕಳಸದಲ್ಲಿ ಕಿರುಗೂಡುಗಳನ್ನು ಕಾಣುತ್ತೇವೆ. ಈ ಗೂಡಿನಲ್ಲಿ ಸಿಂಹಕೀರ್ತಿ ಮುಖಗಳಿವೆ. ಈ ರೀತಿಯ ಅಲಂಕರಣ ಹೊಂದಿರುವ ಕಂಬಗಳನ್ನು ಸ್ಥಳೀಯ ಶಂಭುಲಿಂಗ ದೇವಾಲಯದಲ್ಲಿ ಕಾಣಬಹುದು ದೇವಾಲಯ ಸಂಪೂರ್ಣ ಅದೀಷ್ಠಾನದ ಮೇಲಿದೆ. ಅನೇಕ ಪಟ್ಟಿಕೆಗಳನ್ನು ಕಾಣುತ್ತೇವೆ. ದೇವಾಲಯದ ಭಿತ್ತಿಯು ಸರಳವಾಗಿದೆ. ಶಿಖರ ಸಂಪೂರ್ಣ ನಾಶವಾಗಿದ್ದು, ಈಗ ಸಮತಟ್ಟಾಗಿದೆ. ದೇವಾಲಯದ ಹಿಂದಿನ ಸೋಮಸೊತ್ರವು ಸಿಂಹಪ್ರಣಾಳವಾಗಿದೆ. ಈ ದೇವಾಲಯದ ಪೂರ್ವ ಭಿತ್ತಿಯಲ್ಲಿ ಒಂದು ಕಂಡಿಯನ್ನು ಮಾಡಲಾಗಿದೆ. ಅದು ಯಾವ ಉದ್ದೇಶದಿಂದ ಮಾಡಲಾಗಿದೆ ಎಂದು ತಿಳಿಯುವುದಿಲ್ಲ.

ಕಲ್ಲೇದೇವರಪುರ ಗ್ರಾಮದ ಮಧ್ಯಭಾಗದಲ್ಲಿರುವ ಕಲ್ಲೇಶ್ವರ ದೇವಾಲಯವು ಕಣಕುಪ್ಪೆಯಿಂದ ೧೯ ಕಿ.ಮಿ. ಅಂತರದಲ್ಲಿರುದೆ. ಕ್ರಿ.ಶ. ೧೩ನೇ ಶತಮಾನದ ದೇವಾಲಯವು ಪೂರ್ವಾಭಿಮುಖವಾಗಿದ್ದು ತಳವಿನ್ಯಾಸದಲ್ಲಿ ಗರ್ಭಗುಡಿ, ಅಂತರಾಳ, ನವರಂಗ ಮುಖಮಂಟಪಗಳನ್ನು ಒಳಗೊಂಡಿದೆ. ಹೊರಭಾಗದ ಅಧಿಷ್ಠಾನವು ಉಪಾನ, ಪದ್ಮ, ಕಪೋತ ಭಾಗಗಳನ್ನು ಒಳಗೊಂಡಿದೆ. ಅಲ್ಲಲ್ಲಿ ನಂತರದ ಕಾಲದಲ್ಲಿ ಈ ಭಾಗವನ್ನು ದುರಸ್ಥಿಗೊಳಿಸಿದ್ದಾರೆ. ಭಿತ್ತಿಯ ಭಾಗವು ಅರೆಗಂಭಗಳಿಂದ ಕೂಡಿದ್ದು ಉಳಿದಂತೆ ಸರಳವಾಗಿದೆ. ಮುಖಮಂಟಪದ ಭಾಗವನ್ನು ಇತ್ತೀಚೆಗೆ ನವೀಕರಿಸಲಾಗಿದೆ. ಭಿತ್ತಿಯ ಮೇಲೆ ಪ್ರಸ್ತರ ಭಾಗವಿದ್ದು, ಅದರಲ್ಲಿನ ಕಪೋತ ಭಾಗವು ಕೆಳ ಭಾಗಿದ ರೀತಿಯಲ್ಲಿದ್ದು ಸರಳವಾಗಿದೆ. ಗರ್ಭಗುಡಿಯ ಮೇಲೆ ಕದಂಬ ನಾಗರ ಶೈಲಿಯ ಶಿಖರವಿದೆ.[೧೦] ಶಿಖರದ ಮೇಲೆ ಹಿತ್ತಾಳೆ ಕಳಶವಿದೆ. ಶಿಖರದ ಮುಂಭಾಗದಲ್ಲಿ (ಅಂತರಾಳದ ಮೇಲೆ) ಹೊಯ್ಸಳರ ಲಾಂಚನವಾದ ಸಳ ಹುಲಿಯೊಡನೆ ಹೋರಾಡುತ್ತಿರುವ ಲೌಕಿಕ ಮೂರ್ತಿಯನ್ನು ಇಡಲಾಗಿದೆ. ಆದರೆ ಹುಲಿ ಮಾತ್ರ ಈಗ ಕಾಣುತ್ತಿದ್ದು ಉಳಿದ ಭಾಗ ಭಗ್ನವಾಗಿದೆ.

ಚೌಕಾಕಾರದ ಗರ್ಭಗುಡಿಯಿದ್ದು ಅದರಲ್ಲಿ ಲಿಂಗವಿದೆ. ಇದರ ಮುಚ್ಚಿಗೆಯಲ್ಲಿ ಅರಳಿದ ಪದ್ಮವಿದ್ದು ದ್ವಾರಕ್ಕೆ ಇತ್ತೀಚೆಗೆ ಹಿತ್ತಾಳೆಯ ತಗಡನ್ನು ಹಾಕಿದ್ದಾರೆ. ಅಂತರಾಳವು ಆಯತಾಕಾರವಾಗಿದ್ದು

ದ್ವಾರವು ಸರಳವಾಗಿದೆ. ನವರಂಗವನ್ನು ಪ್ರವೇಶಿಸಲು ಪೂರ್ವ ಮತ್ತು ದಕ್ಷಿಣಕ್ಕೆ ಪ್ರವೇಶದ್ವಾರಗಳಿವೆ. ನವರಂಗದ ಎತ್ತರ ಭಾಗಕ್ಕೆ ಸಣ್ಣ ಕೋಷ್ಠ ಗುಡಿ ಇದೆ. ಅಲ್ಲಲ್ಲಿ ವಿಷ್ಣು, ನಂದಿ, ಗಣಪ, ವೀರಭದ್ರ ಮೊದಲಾದ ಮೂರ್ತಿಗಳಿವೆ. ಮಧ್ಯದಲ್ಲಿ ನಾಲ್ಕು ಬಳಪದ ಕಲ್ಲಿನ ಕಂಬಗಳಿದ್ದು ಅವು ಚೌಕ ಹಾಗೂ ವೃತ್ತಾಕಾರವಾಗಿವೆ. ದಂಡಾಗ್ರ ಭಾಗವು ವೃತ್ತಾಕಾರವಾಗಿ ಗಂಟೆಯ ಅಲಂಕಾರದಿಂದ ಇದೆ. ಗಂಟೆಯಾಕಾರದ ಭಾಗದಲ್ಲಿ ಮಣಿಸರ, ಮತ್ತು ಪುಷ್ಪಗಳನ್ನು ಬಡಿಸಿರುವುದು ವಿಶೇಷ. ನವರಂಗದ ದ್ವಾರವು ಸರಳವಾಗಿದ್ದು ಲಲಾಟದಲ್ಲಿ ಗಣಪತಿಯ ಶಿಲ್ಪವಿದೆ. ಮುಖಮಂಟಪದಲ್ಲಿ ನಾಲ್ಕು ಗ್ರಾನೈಟ್ ಕಲ್ಲಿನ ಕಂಬಗಳಿವೆ. ಮುಖಮಂಟಪದಲ್ಲಿ ನಂತರದ ಕಾಲದಲ್ಲಿ ನಿರ್ಮಿಸಿದ ಗೌರಮ್ಮ, ವೀರಭದ್ರನ ಉಪಗುಡಿಗಳಿವೆ. ಮುಖ ಮಂಟಪದ ದ್ವಾರದಲ್ಲಿ ಶೈವ ದ್ವಾರಪಾಲಕರಿದ್ದಾರೆ. ಅವರ ಎಡಬಲದಲ್ಲಿ ಚಾಮರ ಹಿಡಿದ ಸ್ತ್ರೀಯರು ಹಾಗೂ ಅಂಜಲಿ ಬದ್ಧ ಸ್ತ್ರೀಯರಿದ್ದಾರೆ. ದೇವಾಲಯದ ಮುಂಭಾಗದಲ್ಲಿ ನಂದಿ ಮೂರ್ತಿ ಹಾಗೂ ಉಯ್ಯಾಲೇ ಕಂಬವಿದೆ. ದೇವಾಲಯದ ಮೇಲಿರುವ ಲಾಂಛನ ಹಾಗೂ ವಾಸ್ತುಲಕ್ಷಣಗಳನ್ನು ಆಧಾರವಾಗಿಟ್ಟುಕೊಂಡು ಈ ದೇವಾಲಯ ಹೊಯ್ಸಳ ಕಾಲದ್ದೆಂದು ಹೇಳಬಹುದು.

ಗಣಪತಿ ದೇವಾಲಯವು ಬಳಿಚೋಡು ಗ್ರಾಮದ ಮಧ್ಯಭಾಗದಲ್ಲಿದ್ದು ಕ್ರಿ.ಶ.೧೬-೧೭ನೇ ಶತಮಾನದ್ದು. ಕಣಕುಪ್ಪೆಯಿಂದ ಸುಮಾರು ೨೨ ಕಿ.ಮ.ಅಂತರದಲ್ಲಿರುವ ದೇವಾಲಯವು ಪೂರ್ವಾಭಿಮುಖವಾಗಿದ್ದು ಚಿಕ್ಕದಾದ ಗರ್ಭಗುಡಿಯನ್ನು ಹೊಂದಿ, ಮಧ್ಯೆ ಗಣಪತಿ ಮೂರ್ತಿಯನ್ನು ಪ್ರತಿಷ್ಠಾಪಿಸಲಾಗಿದೆ. ಗರ್ಭಗೃಹದ ಭಿತ್ತಿಯಲ್ಲಿ ಪಟ್ಟಿಕೆಗಳಿವೆ. ಗರ್ಭಗೃಹದ ಮುಂದೆ ಅರ್ಧಮಂಟಪವಿದೆ. ಚೌಕಾಕಾರದ ಭುವನೇಶ್ವರಿಯಲ್ಲಿ ಪದ್ಮವಿದೆ. ಬಾಗಿಲುವಾಡದ ಲಲಾಟದಲ್ಲಿ ಪದ್ಮವಿದ್ದು. ಪ್ರವೇಶದ್ವಾರದ ಲಲಾಟದಲ್ಲಿ ಲಕ್ಷ್ಮೀಶಿಲ್ಪವಿದೆ. ದ್ವಾರದಲ್ಲಿ ಸರಳಶಾಖೆಗಳಿವೆ. ದ್ವಾರಬಾಗಿಲ ಇಕ್ಕೆಲಗಳೆಲ್ಲಿ ವೈಷ್ಣವ ದ್ವಾರಪಾಲಕರನ್ನು ಕಾಣುತ್ತೇವೆ. ಈ ದೇವಾಲಯದ ಲಕ್ಷಣಗಳನ್ನು ಗಮನಿಸಿದರೆ, ಗರ್ಭಗೃಹದಲ್ಲಿಯ ಗಣಪತಿ ಶಿಲ್ಪವನ್ನು ನಂತರದಲ್ಲಿ ಪ್ರತಿಷ್ಠಾಪಿಸಲಾಗಿದೆ. ಆದರೆ ಬಾಗಿಲುವಾಡದ ಲಲಾಟದಲ್ಲಿ ಲಕ್ಷ್ಮೀಯ ಶಿಲ್ಪ ನೈಷ್ಣವ ದ್ವಾರಪಾಲಕ ಶಿಲ್ಪಗಳನ್ನು ಗಮನಿಸಿದರೆ ಇದೊಂದು ವೈಷ್ಣವ ದೇವಾಲಯ ಎಂದು ಹೇಳಬಹುದು.

ಕಣಕುಪ್ಪೆಯಿಂದ ೭ ಕಿ.ಮಿ. ಅಂತರದಲ್ಲಿರುವ ವೀರಭದ್ರ[1] ದೇವಾಲಯವು ಕೊಡದ ಗುಡ್ಡದ ಮೇಲಿದೆ ಕ್ರಿ.ಶ.೧೩-೧೪ನೇ ಶತಮಾನ ಇದು ಪೂರ್ವ ಮತ್ತು ದಕ್ಷಿಣ ಎರಡೂ ಕಡೆ ದ್ವಾರ ಬಾಗಿಲುಗಳನ್ನು ಹೊಂದಿದೆ. ಚೌಕಾಕಾರದ ಗರ್ಭಗೃಹ ಅದರ ಕಲ್ಲಿನಲ್ಲಿ ಒಡಮೂಡಿದ ವೀರಭದ್ರನ ಶಿಲ್ಪವಿದೆ. ಅದಕ್ಕೆ ಇತ್ತೀಚೆಗೆ ಹಿತ್ತಾಳೆಯ ಮುಖವಾಡ ಹಾಕಿದ್ದಾರೆ. ಗರ್ಭಗೃಹಕ್ಕೆ ಹೊಂದಿಕೊಂಡಂತೆ ತೆರೆದ ಅಂತರಾಳ ಇದ್ದು ಯಾವುದೇ ರೀತಿಯ ಅಲಂಕರಣ ಇಲ್ಲ. ದ್ವಾರ ಬಾಗಿಲ ಇಕ್ಕೆಲಗಳೆಲ್ಲಿ ವೀರಭದ್ರ ಶಿಲ್ಪಗಳಿವೆ. ನವರಂಗದಲ್ಲಿ ನಾಲ್ಕು ಹೊಯ್ಸಳ ಶೈಲಿಯ ಕಂಬಗಳಿದ್ದು ಅವು ಪಾದ, ಬಹುಮುಖ ದಿಂಡು, ಕಳಸ ಅದರಲ್ಲಿ ಗಂಟೆಯಾಕಾರವನ್ನು ಕಾಣುತ್ತೇವೆ. ಭುವನೇಶ್ವರಿಯಲ್ಲಿ ಮೂರು

ಚೌಕಗಳಿದ್ದು ನಡುವೆ ಪದ್ಮದ ಅಲಂಕಾರಣ ಇದೆ. ಅದರ ಸುತ್ತಲೂ ಚಿಕ್ಕ ಪದ್ಮಗಳಿವೆ, ದ್ವಾರ ಬಾಗಿಲಿನ ಲಲಾಟದಲ್ಲಿ ಕೀರ್ತಿಮುಖ ಸಿಂಹವನ್ನು ಕಾಣುತ್ತೇವೆ. ಅದರ ಮೇಲೆ ಲಿಂಗದಲ್ಲಿ ಒಡಮೂಡಿದ ಶಿವಲಿಂಗ, ಪದ್ಮ ಪೀಠದ ಮೇಲೆ ಮಲಗಿರುವ ನಂದಿ, ಗಣೇಶ ನಂದಿ, ಲಿಂಗ, ಶಿವ ಶಿಲ್ಪಗಳನ್ನು ಕಾಣುತ್ತೇವೆ. ದ್ವಾರಬಾಗಿಲನ್ನು ಇತ್ತೀಚೆಗೆ ಹಿತ್ತಾಳೆ ತಗಡಿನಿಂದ ಮುಚ್ಚಲಾಗಿದೆ ಈ ದೇವಾಲಯದ ಎದುರಿಗೆ ಮತ್ತೊಂದು ಸಣ್ಣ ಗುಡಿ ಇದೆ. ಅದರಲ್ಲಿ ನಂದಿಯನ್ನು ಪ್ರತಿಷ್ಠಾಪಿಸಲಾಗಿದೆ. ದೇವಾಲಯದ ಮುಂದೆ ಇತ್ತೀಚೆಗೆ ದ್ರಾವಿಡ ಶೈಲಿಯ ಗೋಪುರವನ್ನು ಕಾಣುತ್ತೇವೆ.

ಕಣಕುಪ್ಪೆಯಿಂದ ೭ ಕಿ.ಮಿ. ಅಂತರದಲ್ಲಿರುವ ಶಿವ ದೇವಾಲಯವು ಕೊಡದ ದುಡ್ಡದ ಕೆಳಗಡೆ ಇದೆ. ಕ್ರಿ.ಶ.೧೬-೧೭ನೇ ಶತಮಾನ ಇದು ಪೂರ್ವಾಭಿಮುಖವಾಗಿದ್ದು ಚೌಕಾಕಾರದ ಗರ್ಭಗೃಹ ಅದರ ಮೇಲೆ ಇಂಡೋ ಇಸ್ಲಾಮಿಕ್ ಶೈಲಿಯ ಶಿಖರ ಸಣ್ಣ ಕೋಷ್ಟಕ ಗುಡಿಗಳಿವೆ. ಗರ್ಭಗೃಹದ ಪೀಠದ ಮೇಲೆ ನಂದಿ ಶಿಲ್ಪವನ್ನು ಪ್ರತಿಷ್ಠಾಪಿಸಲಾಗಿದೆ. ಗರ್ಭಗೃಹದ ದ್ವಾರಬಾಗಿಲಲ್ಲಿ ಶೈವ ದ್ವಾರಪಾಲಕರು, ಲಲಾಟದಲ್ಲಿ ಗಜಲಕ್ಷ್ಮೀ ಶಿಲ್ಪವನ್ನು ಕಾಣುತ್ತೇವೆ. ನವರಂಗದಲ್ಲಿ ನಾಲ್ಕು ಕಂಬಗಳಿದ್ದು ಅವುಗಳಲ್ಲಿ ವಿವಿಧ ರೀತಿಯ ಉಬ್ಬು ಶಿಲ್ಪಗಳನ್ನು ಕಾಣಬಹುದು. ಕಂಬಗಳು ಚೌಕಾಕಾರದ ಪೀಠ, ಪಾದ, ದಿಂಡು, ಕಳಸ, ಬೋದಿಗಗಳನ್ನು ಹೊಂದಿವೆ. ಭಿತ್ತಿಯಲ್ಲಿ ಹನ್ನೆರಡು ಅರೆಗಂಬಗಳಿವೆ. ಅಂಗಳದಲ್ಲಿ ನಾಲ್ಕು ಕಂಬಗಳಿವೆ. ಈ ದೇವಾಲಯದಲ್ಲಿ ಇಂಡೋ ಇಸ್ಲಾಮಿಕ್ ಶೈಲಿಯ ಪ್ರಭಾವವನ್ನು ಕಾಣುತ್ತೇವೆ. ದೇವಾಲಯದ ಹೊರ ಭಿತ್ತಿಯಲ್ಲಿ ವಿವಿಧ ಶಿಲ್ಪಗಳಾದ ಯತಿ, ಗರುಡ, ಹಾವನ್ನು ತನ್ನ ಕೈಗಳಲ್ಲಿ ಹಿಡುದು ಹಾರುತ್ತಿದೆ, ಲಜ್ಜಾಗೌರಿ, ನಂದಿ, ನಾಗ, ಕೋತಿಯ ಶಿಲ್ಪಗಳಿವೆ.

ಬಳಿಚೋಡು ಗ್ರಾಮದ ಮಧ್ಯದಲ್ಲಿರುವ ಆಂಜನೆಯ ದೇವಾಲಯವು, ಕಣಕುಪ್ಪೆಯಿಂದ ಸುಮಾರು ೨೨ ಕಿ.ಮಿ. ಅಂತರದಲ್ಲಿರುದೆ. ಕ್ರಿ.ಶ.೧೬-೧೭ನೇ ಶತಮಾನದ ಇದು ದಕ್ಷಿಣಾಭಿಮುಖವಾಗಿದ್ದು ತಳವಿನ್ಯಾಸದಲ್ಲಿ ಗರ್ಭಗೃಹ ಹಾಗೂ ಹಜಾರವನ್ನು ಹೊಂದಿದೆ. ಚೌಕಾಕಾರದ ಗರ್ಭಗೃಹದಲ್ಲಿ ಆಂಜನೇಯ ಮೂರ್ತಿಯನ್ನು ಪ್ರತಿಷ್ಠಾಪಿಸಲಾಗಿದೆ. ಲಲಾಟದಲ್ಲಿ ಪದ್ಮದ ಅಲಂಕರಣೆ ಇದೆ. ಗರ್ಭಗೃಹದ ಮುಂಭಾಗದಲ್ಲಿ ವಿಶಾಲವಾದ ಹಜಾರವಿದೆ. ಇದರಲ್ಲಿ ನಾಲ್ಕು ಪೂರ್ಣ ಕಂಬಗಳು ಹನ್ನೆರಡು ಅರೆಗಂಬಗಳನ್ನು ಕಾಣುತ್ತೇವೆ. ಕಂಬಗಳು, ಚೌಕಾಕಾರದ ಪೀಠ, ಪಾದ, ಬಹುಮುಖದಿಂಡು, ಚೌಕ, ದಿಂಡು, ಬೋಧಿಗೆಯನ್ನು ಒಳಗೊಂಡಿವೆ. ಕಂಬದಲ್ಲಿ ವಿವಿಧ ದೇವ-ದೇವತೆಯ ಉಬ್ಬು ಕೆತ್ತನೆಗಳಿವೆ. ಭಿತ್ತಿಯು ಸರಳ ರೀತಿಯಲ್ಲದೆ, ಸಾಮಾನ್ಯವಾಗಿ ವಿಜಯನಗರದ ಅರಸರಕಾಲದಲ್ಲಿ ಈ ಶೈಲಿಯ ಕಂಬಗಳನ್ನು ಕಾಣುತ್ತೇವೆ. ಅರಸರು ಆಂಜನೇಯ ದೇವಾಲಯಗಳ ನಿರ್ಮಾಣಕ್ಕೆ ಆದ್ಯತೆ ನೀಡಿರುವುದನ್ನು ಗಮನಿಸಬಹುದು.

ಕಣಕುಪ್ಪೆಯಿಂದ ಸುಮಾರು ೨೨ ಕಿ.ಮಿ. ಅಂತರದಲ್ಲಿರುವ ಮೈಲಾರ ಲಿಂಗೇಶ್ವರ ದೇವಾಲಯವು ಬಳಿಚೋಡು ಗ್ರಾಮದ ಮಧ್ಯದಲ್ಲಿದೆ. ಕ್ರಿ.ಶ.೧೬-೧೭ನೇ ಶತಮಾನದ ಈ ದೇವಾಲಯವು

ಪೂರ್ವಾಭಿಮುಖವಾಗಿದ್ದು ಚೌಕಾಕಾರದ ಗರ್ಭಗೃಹ, ಮುಚ್ಚಿದ ಅಂತರಾಳ ಮತ್ತು ನವರಂಗಗಳನ್ನು ಹೊಂದಿದೆ. ಗರ್ಭಗುಡಿಯಲ್ಲಿ ಎರಡು ಮೈಲಾರ ಲಿಂಗೇಶ್ವರ ಮೂರ್ತಿಗಳನ್ನು ಪ್ರತಿಷ್ಠಾಪಿಸಲಾಗಿದೆ. ಗರ್ಭಗುಡಿಗೆ ಹೊಂದಿಕೊಂಡಂತೆ ಮುಚ್ಚಿದ ಅಂತರಾಳವಿದ್ದು ಎರಡೂ ಇಕ್ಕೆಲಗಳಲ್ಲಿ ಜಾಲಂದ್ರಗಳ ವ್ಯವಸ್ಥೆ ಇದೆ. ಬಾಗಿಲುವಾಡದ ಲಲಾಟದಲ್ಲಿ ಗಜಲಕ್ಷ್ಮೀ ಶಿಲ್ಪವಿದ್ದು ದ್ವಾರಬಾಗಿಲು ಸರಳ ಶಾಖೆಗಳನ್ನು ಹೊಂದಿದೆ, ನವರಂಗದಲ್ಲಿ ನಾಲ್ಕು ಕಂಬಗಳಿದ್ದು ಪೀಠ, ಚೌಕಾಕಾರದ ಪಾದ, ಬಹುಮುಖ ದಿಂಡು, ಕಳಸ, ಅಬ್ಯಾಕಸ್, ಬೋದಿಗೆಗಳನ್ನು ಒಳಗೊಂಡಿದೆ. ಈ ದೇವಾಲಯದ ಲಕ್ಷಣಗಳನ್ನು ನೋಡಿದರೆ ಮೂಲತಃ ಬೇರೆ ದೇವರಗುಡಿಯಾಗಿದ್ದು ಇತ್ತೀಚಿಗೆ ಮೈಲಾರ ಲಿಂಗೇಶ್ವರ ಮೂರ್ತಿಗಳನ್ನು ಪ್ರತಿಷ್ಠಾಪಿಸಿದ್ದಾರೆ ಎಂಬ ಅನುಮಾನ ಬರುತ್ತದೆ.

**ಕಣಕುಪ್ಪೆ ಗವಿಮಠ**

ಕಣಕುಪ್ಪೆ ಗವಿಮಠ ಐತಿಹಾಸಿಕ, ಪೌರಾಣಿಕಗಳಿಂದ ಪ್ರಸಿದ್ಧಿ ಪಡೆದ ಪುಣ್ಯಭೂಮಿ. ವಿಶಾಲವಾದ ಬೆಟ್ಟ ಗುಡ್ಡಗಳನ್ನು ಹೊಂದಿದ ಈ ಗವಿಮಠ ಪ್ರದೇಶದಲ್ಲಿ ಕಣ್ವ ಮಹರ್ಷಿಗಳು ನೆಲಸಿ ಶಿವಾನುಷ್ಠಾನ ಮೂಲಕ ಈ ಪ್ರದೇಶವನ್ನು ಪಾವನಗೊಳಿಸಿದ್ದಾರೆ. ಈ ಮಠದ ಬಗ್ಗೆ ಇರುವ ಪೌರಾಣಿಕ ಕಥೆ ಪ್ರಕಾರ, ಕಣ್ವಋಷಿ ಪುರಾತನ ಕಾಲದಲ್ಲಿ ಈ ಪ್ರದೇಶದಲ್ಲಿ ಇದ್ದ. ಬಹುಕಾಲ ತಪಸ್ಸು ಮಾಡಿದ.ಇಲ್ಲಿ ಒಂದು ವಿಶಿಷ್ಟ ಜಂಬುನೇರಳೆ ಮರವಿತ್ತು. ಅದು ಹನ್ನೆರಡು ವರುಷಕ್ಕೆ ಒಂದೇ ಫಲ ಬಿಡುತ್ತಿತ್ತು. ಹನ್ನೆರಡು ವರ್ಷಗಳವರೆಗೆ ನಿರಾಹಾರ ವ್ರತದಲ್ಲಿ ತಪಸ್ಸು ಮಾಡುತ್ತಿದ್ದ ಕಣ್ವಋಷಿ ಈ ನೇರಲೆ ಫಲವನ್ನು ಸ್ವೀಕರಿಸುತ್ತಿದ್ದ. ಈ ಮರ ಕಣ್ವರದು, ಇದರ ಫಲ ಕಣ್ವರದೆಂದು ತಿಳಿದು ಜನರು ಈ ಮರದ ಹತ್ತಿರ ಬರುತ್ತಿರಲಿಲ್ಲ. ಹಣ್ಣನ್ನು ಮುಟ್ಟುತ್ತಿರಲಿಲ್ಲ. ಅಂತಹ ಸಮಯದಲ್ಲಿ ಅಜ್ಞಾತವಾಸದಲ್ಲಿದ್ದ ಪಾಂಡವರು ದ್ರೌಪದಿಯೊಂದಿಗೆ ಈ ಪ್ರದೇಶಕ್ಕೆ ಬರುತ್ತಾರೆ. ಹನ್ನೆರಡು ವರುಷದ ಕಾಲಕ್ಕೆ ಸರಿಯಾಗಿ ಈ ಮರ ಹಣ್ಣು ಬಿಟ್ಟಿದೆ. ಈ ಅಪರೂಪದ ಜಂಬುನೇರಲೆ ಹಣ್ಣನ್ನು ದ್ರೌಪತಿ ನೋಡುತ್ತಾಳೆ. ಗಾತ್ರದಲ್ಲಿ ಅತಿ ದೊಡ್ಡದಾದ, ರಸಭರಿತ ಸುಮಧುರ ವಾಸನೆ ಹರಡಿದ ವಿಶಿಷ್ಟವಾದ ಹಣ್ಣನ್ನು ದ್ರೌಪತಿ ನೋಡಿ ಆಶ್ಚರ್ಯ ಚಕಿತಳಾಗಿ ತಿನ್ನಲಿಚ್ಛಿಸಲು ನಕುಲ ಸಹದೇವ ಆ ಹಣ್ಣನ್ನು ಮರದಿಂದ ಕಿತ್ತುಕೊಟ್ಟರು. ಆ ಸಮಯಕ್ಕೆ ಧರ್ಮರಾಜ ಬಂದ, ವಿಶಿಷ್ಟವಾದ ಹಣ್ಣನ್ನು ದ್ರೌಪತಿ ತೋರಿಸುತ್ತಾಳೆ. ಜ್ಞಾನಿಯಾದ ಧರ್ಮರಾಜನು ನೋಡಿ ಇದು ಕಣ್ವ ಋಷಿಯ ಆಹಾರ ಇದನ್ನು ನೀನು ತಿನ್ನಬಾರದು, ತಿಂದರೆ ದೋಷ ಬರುತ್ತದೆ ಎಂದು ಹೇಳಿದಾಗ ಈ ಹಣ್ಣನ್ನು ಗಿಡದಿಂದ ಹರಿದಾಗಿದೆಯಲ್ಲಣ್ಣ ಏನು ಮಾಡುವುದು? ನಕುಲ ಸಹದೇವರು ಕೇಳಿದಾಗ ಪುನಃ ಗಿಡದ ದೇಟಿಗೆ ಇದನ್ನು ಅಂಟಿಸಬೇಕು? ಎಂದು ಧರ್ಮರಾಜ ಅಂಟುತ್ತಾ? ವ್ಯಾಕುಲದಿಂದ ನಕುಲ ಸಹದೇವರು ಕೇಳಿದರು, "ಹೂಂ ಅಂಟುತ್ತೆ" ಎಂದ ಧರ್ಮರಾಜ.

ಅವಸರದಲ್ಲಿ ಹೋಗಿ ಹರಿದ ಗಿಡದ ದೇಟಿಗೆ ಹಣ್ಣನ್ನಿಟ್ಟರು ನಕುಲ ಸಹದೇವರು, ಅಂಟದೆ ಹಣ್ಣು ಕೆಳಗೆ ಬಿತ್ತು. ಆಗ ಧರ್ಮರಾಜ ನಗುತ್ತಾ "ಹುಚ್ಚಪ್ಪಗಳಿರಾ ನೀ ಅಂಟಿಸಿದರೆ ಹತ್ತಲ್ಲ. ದ್ರೌಪತಿ ಹಚ್ಚಬೇಕು ಅಗ ಹತ್ತುವುದು" ಎಂದು ಹೇಳಿದ. ಆ ಹಣ್ಣನ್ನು ದೌಪಧಿಯ ಕೈಗಿತ್ತು. 'ಪತಿವ್ರತಾಶಕ್ತಿ',

ಎಂದು ಹೇಳಿದ. ಆ ಹಣ್ಣನ್ನು ದ್ರೌಪಧಿಯ ಕೈಗಿಟ್ಟು 'ಪತಿವ್ರತಾಶಕ್ತಿ', ದಿಟವಾಗಿದ್ದರೆ. ಈ ಹಣ್ಣು ದೇಟಿಗೆ ಅಂಟಲಿ ಎಂದು ಅಂಟಿಸು ಎಂದು ಹೇಳಿದ. ದ್ರೌಪತಿಯು ಭಯ ಭಕ್ತಿಯಿಂದ ಶ್ರೀ ಕೃಷ್ಣಪರಮಾತ್ಮನ ನೆನೆದು. "ಪಂಚಪಾಂಡವರೇ ಪಂಚಮುಖ ಪರಮೇಶ್ವರರು ಎಂದು ನಾನು ನಂಬಿದ್ದೇ ನಿಜವಾಗಿದ್ದರೆ, ಈ ಹಣ್ಣು ಮೊದಲಿನಂತೆ ದೇಟಿಗೆ ಅಂಟಲಿ" ಎಂದು ದೇಟಿಗೆ ಹಣ್ಣನ್ನ ಮುಟ್ಟಿಸಲು; ಅಂಟಿಕೊಂಡಿತು. ಈ ಘಟನೆ ನಡೆದಾದ ಮೇಲೆ ಕೆಲವು ಕಾಲವಿದ್ದು, ನಂತರ ಅವರು ಬೇರೆ ಕಡೆಗೆ ಹೊರಟು ಹೋದರು. ಕೆಲ ದಿನಗಳ ನಂತರ ಕಣ್ವಋಷಿ ತಪಸ್ಸು ಮುಗಿಸಿ ಈ ಮರದತ್ತ ಬಂದು ತಿನ್ನಲೆಂದು ಜಂಬೂಫಲ ಕಿತ್ತುಕೊಂಡ. ದಿಟ್ಟಿಸಿ ನೋಡಿದ, "ದ್ರೌಪತಿ ಇದನ್ನು ತಿನ್ನ ಬಯಸಿದ್ದು" ಎಂಬುದು ಜ್ಞಾನಿಯಾದ ಕಣ್ವನಿಗೆ ತಿಳಿದು "ಅವಳು ಬಯಸಿದ್ದು ನಾನು ತಿನ್ನುವುದು ಸರಿಯಲ್ಲ ಎಂದೆನ್ನುತ್ತ ಹಣ್ಣನ್ನು ಭೂಮಿಯಲ್ಲಿ ಹುಗಿದು; ಹೊರಟು ಹೋದ.

ಕಾಲಾಂತರದಲ್ಲಿ ಆ ಹಣ್ಣು ಶಿವಶಕ್ತಿ ಕುರುಹಾಗಿ ಬೆಟ್ಟದಲ್ಲಿ ಪ್ರಾದುರ್ಭವಿಸುತ್ತದೆ. ಆ ಸಮಯದಲ್ಲಿ ಶ್ರೀಮದುಜ್ಜಯಿನಿ ಪೀಠದ ಕರ್ತೃ ಜಗದ್ಗುರು ಮರುಳಸಿದ್ಧ ಮಹಾಸ್ವಾಮಿಗಳು ಇಲ್ಲಿಗೆ ಆಗಮಿಸಿ, ಶಿವಶಕ್ತಿ ಕುರುಹಿಗೆ ವಿಧಿವತ್ ಪ್ರಾಣ ಪ್ರತಿಷ್ಠಾಪಿಸಿ, ಸ್ಥಾಪಿಸಿ, ಗುಡಿಕಟ್ಟಿಸಿ, ಪೂಜಿಸುವ ವ್ಯವಸ್ಥೆ ಮಾಡುತ್ತಾರೆ. ಅರ್ಚಕರ ವಾಸಕ್ಕೆ ಉಜ್ಜಯಿನಿ ಶಾಖೆ ಮಠ ರಚಿಸಿ ಪೂಜೆ ಧರ್ಮಕಾರ್ಯಗಳಲ್ಲಿ ನಡೆಸಿರಿ ಎಂದು ಅಪ್ಪಣೆ ಮಾಡಿ ಆಶೀರ್ವದಿಸುತ್ತಾರೆ. ಉಜ್ಜಿನಿ ಶ್ರೀಗಳೆ ಅಪ್ಪಣೆ ಮಾಡುತ್ತಾರೆ.

ಪೂಜಾಧಿ ಧಾರ್ಮಿಕ ವಿಧಿ ಕಾರ್ಯಗಳನ್ನು ನಿಷ್ಠೆಯಿಂದ ನೆರವೇರಿಸುತ್ತ ಸಾಗಿದ ಕಾರಣದಿಂದ ಕಣ್ವಕುಪ್ಪೆ ಪ್ರದೇಶ ಧರ್ಮಕೇಂದ್ರವಾಗುತ್ತದೆ. ಈ ನಿತಾಂತ ಪ್ರದೇಶದಲ್ಲಿ ಧರ್ಮಡಳಿತ ನಡೆಸುವ ಪೂಜ್ಯರಿಗೆ ನಿತಾಂತಗುರು ಸುಶಾಂತಸ್ವಾಮಿ ಎಂದು ಜನ ಸಂಬೋಧಿಸಿ ಬಾಗುತ್ತಾರೆ. ಮುಂದೆ ಶಾಂತಸ್ವಾಮಿ, ಶಾಂತವೀರಸ್ವಾಮಿ, ಶಾಂತಲಿಂಗಸ್ವಾಮಿ ಹೆಸರಿನ ಹಲವು ಪೂಜ್ಯರು ಇಲ್ಲ ಸದ್ಧರ್ಮಡಾಳಿತ ನಡೆಸುತ್ತಾರೆ.[೯]

ಪ್ರಸ್ತುತ ಮಠದಲ್ಲಿ ಶ್ರೀ ನಾಲ್ವಡಿ ಶಾಂತಲಿಂಗ ಶಿವಾಚಾರ್ಯ ಸ್ವಾಮೀಜಿಯವರು ಇದ್ದು ಮಠದಲ್ಲಿ ನಿತ್ಯದಾಸೋಹ, ಶಾಲೆ, ಪೂಜಾ ಕಾರ್ಯಕ್ರಮಗಳು ಹಾಗೂ ಸಾಮೂಹಿಕ ವಿವಾಹಗಳು ನಡೆದುಕೊಂಡು ಬರುತ್ತಿವೆ. ಮಠವು ಕಣಕುಪ್ಪೆಗೆ ಮಾತ್ರ ಸೀಮಿತವಾಗದೇ ಹಾವೇರಿ ಜಿಲ್ಲೆ ಹಾನಗಲ್ ತಾ.ಕೋಡಿಯಲ್ಲಾಪುರ ಶ್ರೀ ರೇವಣಸಿದ್ದೇಶ್ವರ ಬ್ರಹ್ಮನ್ಮಠ ಮತ್ತು ಆಂಧ್ರರಾಜ್ಯದ ಅನಂತಪುರದ ಜಿಲ್ಲೆ ಕಲ್ಯಾಣದುರ್ಗ ತಾಲ್ಲೂಕು ಮುಪ್ಪಲಕುಂಟೆ ಶ್ರೀ ಕ್ಷೇತ್ರದ ಅಧಿಪತಿಯಾಗಿ ಏಕೈಕ ಪೀಠಾಧ್ಯಕ್ಷರಾಗಿ ಸ್ವಾಮಿಗಳು ಮಠದ ಅಭಿವೃದ್ಧಿಗೆ ಶ್ರಮಿಸುತ್ತಿದ್ದಾರೆ.[೧೦]

## ಮುಷ್ಠೂರು ಮಠ

ಸುಮಾರು ೨೫೦ ವರ್ಷಗಳ ಹಿಂದೆ ಮಠವು ಸ್ಥಾಪಿತವಾಗಿದ್ದಿರಬಹುದು. ಇದರ ಮೂಲಪುರುಷ ಆಂಧ್ರಪ್ರದೇಶದಿಂದ ಬಂದಿದ್ದ ಹುಚ್ಚಲಿಂಗಸ್ವಾಮಿಗಳು ಇವರು ಸಿದ್ಧರಾಗಿದ್ದು ಸಂಸಾರದಿಂದ ದೂರವಿದ್ದರು,

ಸದಾ ತಮ್ಮದೇ ಲಹರಿಯಲ್ಲಿರುತ್ತಿದ್ದರಿಂದ ಇವರಿಗೆ ಈ ಹೆಸರು ಬಂದಿತೆಂದು ತಿಳಿದು ಬರುವುದು. ಇದರಿಂದ ಕೋಪಗೊಂಡ ಪಾಳೆಯಗಾರರು ಈ ಹುಚ್ಚಸ್ವಾಮಿಯನ್ನು ಕಂಠಮಟ್ಟದವರೆಗೆ ಭೂಮಿಯಲ್ಲಿ ಹೂಳಿಸಿಬಿಟ್ಟರು. ಅರಮನೆಗೆ ಬಂದು ನೋಡಿದಾಗ ಹುಚ್ಚುಸ್ವಾಮಿ ಅಂತಃಪುರದಲ್ಲಿ ಇದ್ದರಂತೆ ಚಕಿತರಾದ ಪಾಳೆಯಗಾರರು ಅವರಿಗೆ ಮಠಕಟ್ಟಿಸಿಕೊಟ್ಟು ಅವರನ್ನು ಭಕ್ತಿಯಿಂದ ನಡೆಸಿಕೊಂಡರೆಂಬ ಕಥೆ ಹೇಳುತ್ತಾರೆ. ಈ ಸ್ವಾಮಿಗಳು ಮಠವು ಮುಷ್ಟೂರಿನಲ್ಲಿರುವುದರಿಂದ ಮುಷ್ಟೂರು ಮಠವೆಂದು ಹೆಸರಾಯಿತು. ಈ ಮಠವು ವೀರಶೈವ ಧರ್ಮವನ್ನು ಅದ್ವೈತ ತತ್ವವನ್ನು ಪ್ರತಿಪಾದಿಸುತ್ತದೆ. ಚಿತ್ರದುರ್ಗದ ದಂಡಿನ ಕುರುಬರಹಟ್ಟಿಯಲ್ಲಿ ಇದರ ಮೂಲ ಮಠವಿದೆ. ಕಲ್ಲೇದೇವರಪುರ, ಅಣಜಿ, ಹರಪನಹಳ್ಳಿ ತಾಲ್ಲೂಕಿನ ಚೆನ್ನಹಳ್ಳಿ, ಕರೆಮಗಾನಹಳ್ಳಿಗಳಲ್ಲಿ ಈ ಮಠದ ಶಾಖೆಗಳಿವೆ. ನಾಯಕರು, ಅಕ್ಕಸಾಲಿಗಳು ಈ ಮಠದ ಗುರುಗಳಾಗಿರುವುದು. ಪ್ರತಿಯೊಬ್ಬ ಸ್ವಾಮಿಯ ಹಿಂದೆ "ಹುಚ್ಚ" ಎಂಬ ಸೇರ್ಪಡೆಯಿರುವುದು ವೈಶಿಷ್ಟ್ಯಪೂರ್ಣವಾಗಿದೆ. ಪ್ರಸ್ತುತ ದಾಸೋಹ ಹಾಗೂ ವಿದ್ಯಾರ್ಥಿನಿಲಯಗಳನ್ನು ನಡೆಸುವುದರ ಮೂಲಕ ಭಕ್ತಾಧಿಗಳ ಉದ್ಧಾರ ಕಾರ್ಯವನ್ನು ಈ ಮಠವು ನಿರ್ವಹಿಸುತ್ತಿದೆ.[೧೧]

**ಹೊಂಡ (ಪುಷ್ಕರಣಿ)ಗಳು**

ಪಾಳೆಯಗಾರರ ಕಾಲದಲ್ಲಿ ನೀರಿನ ವ್ಯವಸ್ಥೆಗಾಗಿ ದಳವಾಯಿ ಮುದ್ದಣ್ಣ ಹೊಂಡ ಕಟ್ಟಿಸಿದ್ದರಿಂದ ಇದನ್ನು ದಳವಾಯಿ ಮುದ್ದಣ್ಣನ ಹೊಂಡ ಪುಷ್ಕರಣಿ ಎಂದು ಕರೆಯುತ್ತಾರೆ.[೧೨] ಕೊಣಚಗಲ್ ರಂಗನಾಥ ಸ್ವಾಮಿ ಬೆಟ್ಟದ ಪಕ್ಕದಲ್ಲೇ ಇದೆ. ಸುಮಾರು ೧೫೦ ಅಡಿ ಆಳ, ೨೦೦ ಅಡಿಗಳ ವಿಸ್ತೀರ್ಣ ನೀರಿನ ಮಟ್ಟದಿಂದ ೬೦ ಮೆಟ್ಟಿಲುಗಳಿವೆ. ಹೊಂಡದ ನಾಲ್ಕು ಕಡೆ ಕಲ್ಲುಗಳನ್ನು ಸಮವಾಗಿ ಹೊಂದಿಸಿದ್ದಾರೆ. ಹೊಂಡದಲ್ಲಿ ಅನೇಕ ರೀತಿಯ ಉಬ್ಬು ಕೆತ್ತನೆಗಳನ್ನು ಕಾಣುತ್ತೇವೆ. ಹೊಂಡದ ಪೂರ್ವಕ್ಕೆ ಶಿವನಿಗೆ ಪೂಜೆ, ಮಾಲಾರ್ಪಣೆ ಲಿಂಗದ ಮಜ್ಜಿಗೆ ಕಡೆಯುತ್ತಿರುವ ಸ್ತ್ರೀ ಹಾಗೂ ನಾಗರ ಹಾವಿನ ಕೆತ್ತನೆ ಇದೆ. ಪಶ್ಚಿಮಕ್ಕೆ ಲಕ್ಷ್ಮೀವೆಂಕಟೇಶ್ವರ, ಗರಡು ಕಾಳಿಂಗ ಮರ್ದನ ಶಿಲ್ಪಗಳು, ಉತ್ತರಕ್ಕೆ ಕೈಮುಗಿದು ಕುಳಿತಿರುವ ರಾಜನ ವಿಗ್ರಹ, ಆಂಜನೇಯ, ಶ್ರೀಕೃಷ್ಣ ಗೋಪಿಕಾ ಸ್ತ್ರೀಯರು, ಗಂಡು ಬೇರುಂಡ, ದಕ್ಷಿಣಕ್ಕೆ ಒಂಬತ್ತು ದಳಗಳ ಕಮಲ ಗಣೇಶ, ಶಿವನ ಮುಂದೆ ಕುಳಿತ ನಂದಿ, ಮಿಥುನ ಶಿಲ್ಪಗಳು ಹೀಗೆ ಉಬ್ಬುಕೆತ್ತನೆಗಳನ್ನ ಒಳಗೊಂಡಿರುವ ಇದು ಇಂದಿಗೂ ಸುಸ್ಥಿತಿಯಲ್ಲಿದೆ. ಬೆಟ್ಟದ ಮೇಲೆ ಭೂತಪ್ಪಗಳ, ಲಕ್ಷ್ಮೀ ಗುಡಿಯ ಮುಂದೆ ಒಂದು ಸಾಧಾರಣ ಹೊಂಡವಿದೆ.

ಚಿತ್ರದುರ್ಗದಲ್ಲಿ ಭರಮಣ್ಣನಾಯಕನಿಗೆ ಪಟ್ಟವಾದಾಗ ಕಣಕುಪ್ಪೆಯಲ್ಲಿ ಕಾಟನಾಯಕನನ್ನು ಅಧಿಕಾರಿಯನ್ನಾಗಿ ನೇಮಿಸದ ಆಗ ಕಾಟಮದೇವರಿಗಾಗಿ ಕಾಟನಾಯಕನು ಒಂದು ಹೊಂಡ ಕಟ್ಟಿಸಿದ.[೧೩] ಹೊಂಡವನ್ನು ನಾಲ್ಕು ಕಡೆ ಸಮತಟ್ಟಾಗಿ ಸುಮಾರು ೧೦೦ ಅಡಿಗಳ ಆಳ ೧೫೦ ಅಡಿಗಳ ಅಗಲದಲ್ಲಿ ನಿರ್ಮಿಸಲಾಗಿದೆ ಹೊಂಡದಿಂದ ನೀರನ್ನು ಎತ್ತಿ ಹೊರಗಡೆ ಬರಲು ಕಾಲುವೆ ವ್ಯವಸ್ಥೆ ಇದೆ. (ಏತ ನೀರಾವರಿ ಪದ್ಧತಿಯಂತೆ) ಆದರೆ ಇಂದು ಈ ಹೊಂಡ ಶಿಥಿಲಾವಸ್ಥೆಯಲ್ಲಿದೆ.

## ಕೊನೆಟಿಪ್ಪಣಿಗಳು

೦೧. ಗಿರಿಜಾ ಟಿ., ದಾವಣಗೆರೆ ಇದು ನಮ್ಮ ಜಿಲ್ಲೆ, ಪುಟ-೬೨೪

೦೨. ಕಲಬುರ್ಗಿ ಎಂ.ಎಂ., ಕರ್ನಾಟಕದ ಕೈಫಿಯತ್ತುಗಳು, ಪುಟ-೨೯

೦೩. ಅದೇ, ಪುಟ-೩೦

೦೪. ಅದೇ, ಪುಟ-೩೦

೦೫. ಅದೇ, ಪುಟ-೬೩

೦೬. ಗಿರಿಜಾ ಟಿ., ಪೂರ್ವೋಕ್ತ, ಪುಟ-೬೪೫

೦೭. ಸೌಥ್ ಇಂಡಿಯನ್ ಇನ್‌ಸ್ಕ್ರಿಪ್ಷನ್ಸ್, ಸಂ-೨೯, ಶಾ.ಸ.೩೮೦, ಪುಟ-೩೮೦

೦೮. ಎ.ಕ.ಸಂ-೧೧

೦೯. ಅದೇ,

೧೦. ತಿಪ್ಪೇಸ್ವಾಮಿ ಎಚ್.ದಾವಣಗೆರೆ ಜಿಲ್ಲೆಯ ದೇವಾಲಯಗಳು ಅಪ್ರಕಟಿತ ಪ್ರಬಂಧ, ಕನ್ನಡವಿಶ್ವವಿದ್ಯಾಲಯ, ಹಂಪಿ, ಪುಟ-೧೨೫

೧೧. ಶ್ರೀ ಪ.ರಾಜಗುರುಗುರುಸ್ವಾಮಿ ಕಲಿಕೇರಿ, ಕಣ್ವಕುಪ್ಪೆ ಗವಿಮಠದ ಗುರು ಪರಂಪರಾ ಪ್ರಭ, ಪುಟ-೬-೭

೧೨. ಲಕ್ಷ್ಮಣ್ ತೆಲಗಾವಿ, ವಂಕಣ್ಣ ಚಾರ್ ಕೆ., ಐತಿಹಾಸಿಕ ಚಿತ್ರದುರ್ಗ, ಪುಟ-೯೯

೧೩. ಜಗಳೂರು ವಾಯ್ಸ್, ಪೂರ್ವೋತ್ತ, ಪುಟ-೮೦

## ಅಧ್ಯಾಯ - ಐದು

# ಶಾಸನ ಮತ್ತು ಶಿಲ್ಪಗಳು

ಇತಿಹಾಸ ರಚನೆಯಲ್ಲಿ ಶಾಸನಗಳು ಪ್ರಮುಖ ಪಾತ್ರವಹಿಸುತ್ತವೆ. ಹಾಗಾಗಿ ಶಾಸನಗಳು ಇತಿಹಾಸದ ಬೆನ್ನೆಲುಬು ಎಂದರೂ ತಪ್ಪಾಗಲಾರದು. ಶಾಸನಗಳ ಪ್ರಾಚೀನತೆಯನ್ನು ಗಮನಿಸುವುದಾದರೆ ಕ್ರಿ.ಪೂ.೪-೫ನೇ ಶತಮಾನದಲ್ಲಿ ಅಲ್ಲಲ್ಲಿ ಕಂಡುಬಂದರೆ, ಮೌರ್ಯರ ನಂತರ ಕಾಲದಲ್ಲಿ ಹೆಚ್ಚಿನ ಶಾಸನಗಳು ಕಂಡುಬರುತ್ತದೆ. ಈ ಹಿನ್ನೆಲೆಯಲ್ಲಿ ಮೌರ್ಯರ ನಂತರದ ಕಾಲವನ್ನು ಇತಿಹಾಸಯುಗವೆಂದು ಪರಿಗಣಿಸಲಾಗಿರುವುದು. ಕ್ರಿ.ಪೂ.೩ನೇ ಶತಮಾನದಿಂದ ಮಧ್ಯಯುಗೀನ ಆರಂಭದ ಕಾಲದವರೆಗೆ ರಚನೆಗೊಂಡಿರುವ ಶಾಸನಗಳಲ್ಲಿ ಸುಮಾರು ಒಂದು ಲಕ್ಷಕ್ಕೂ ಅಧಿಕ ಶಾಸನಗಳು ದೊರೆತಿವೆ. ಇಂದಿಗೂ ಸಹ ಅಲ್ಲೊಮ್ಮೆ ಇಲ್ಲೊಮ್ಮೆ ಶಾಸನಗಳು ಗೋಚರಿಸುತ್ತಿವೆ. ಈ ಶಾಸನಗಳೇ ಆಯಾ ಕಾಲದ ಸಾಮಾಜಿಕ, ಧಾರ್ಮಿಕ, ರಾಜಕೀಯ ಹಾಗೂ ಇನ್ನಿತರ ಸಾಂಸ್ಕೃತಿಕ ಅಂಶಗಳನ್ನು ತಿಳಿಸುವಲ್ಲಿ ಪ್ರಮುಖ ಪಾತ್ರವಹಿಸುತ್ತವೆ.

ರಾಸನ ಎಂಬ ಪದವು ಸಂಸ್ಕೃತ ಪದ "ಶಾಸ್"ಎನ್ನುವ ದಾತುವಿನಿಂದ ಬಂದಿದ್ದು ಆಜ್ಞಾಪಿಸು, ನಿಯಂತ್ರಿಸು ಎನ್ನುವ ಅರ್ಥವನ್ನು ನೀಡುತ್ತದೆ. ಬಹುತೇಕ ಶಾಸನಗಳು ರಾಜನಿಂದ ಹೊರಡಿಸಲ್ಪಟ್ಟಿದ್ದರೂ ಸಹ ಅನೇಕ ಸಾಮಂತ ಅಧಿಕಾರಿಗಳು, ಸ್ಥಳೀಯ ಅಧಿಕಾರಿಗಳು, ಗ್ರಾಮಗಳ ಮುಖಂಡರುಗಳು, ರಾಣಿಯರು ಶಾಸನಗಳನ್ನು ಹೊರಡಿಸಿರುವುಮ ತಿಳಿದುಬರುತ್ತದೆ. ಬಹುತೇಕ ಶಾಸನಗಳು ಶಿಲಾ ಶಾಸನಗಳಾಗಿದ್ದರೂ ಸಹ ತಾಮ್ರ ಪಟಗಳ ಮೇಲೆ, ಕಬ್ಬಿಣ ಸ್ತಂಭಗಳ ಮೇಲೆ, ಮಡಿಕೆಕುಡಿಕೆಗಳ ಮೇಲೆ ಹಾಗೂ ಇನ್ನಿತರ ಪದಾರ್ಥಗಳ ಮೇಲೆ ಕೆತ್ತಲ್ಪಟ್ಟಿರುವುದು ಕಂಡುಬರುತ್ತದೆ. ಸರಳವಾಗಿ ಹೇಳುವುದಾದರೆ ಗಟ್ಟಿಯಾದ ಪದಾರ್ಥದ ಮೇಲೆ ಕೊರೆದು ಬರೆದಿರುವುದಕ್ಕೆ ಶಾಸನ ಎಂದು ಹೇಳಬಹುದು. ಬ್ರಿಟಾನಿಕಾ ವಿಶ್ವಕೋಶದಲ್ಲಿ ಶಾಸನ ಎಂದರೆ ಹೀಗೆ ವಿವರಿಸಿದೆ. ತಾಳೆಗರಿ, ಭೂರ್ಜಪತ್ರ, ಕಾಗದ ಮುಂತಾದವುಗಳ ಮೇಲೆ ಕಂಡು ಬರುವ ಬರಹಗಳನ್ನು ಬಿಟ್ಟು, ಬಹುಕಾಲ ಉಳಿಯುವ ಸಾಮಗ್ರಿಗಳ ಮೇಲೆ ಕೆತ್ತಿರುವ

ಬರಹಗಳನ್ನು ಶಾಸನಗಳೆಂದು ಸ್ಥೂಲವಾಗಿ ಕರೆಯಬಹುದು.[೨] ಪ್ರಸ್ತುತ ಅಧ್ಯಯನದ ಕಣಕುಪ್ಪೆ ಪರಿಸರ ಜಗಳೂರು ತಾಲ್ಲೂಕಿನಲ್ಲಿ ಎಂಬತ್ತಕ್ಕೂ ಹೆಚ್ಚು ಶಾಸನಗಳು ಕಂಡುಬಂದಿವೆ. ಇವುಗಳಲ್ಲಿ ಬಹುತೇಕ ಎಪಿಗ್ರಾಫಿಯಾ ಕರ್ನಾಟಿಕ ಸಂಪುಟ ೧೧ರಲ್ಲಿ ಪ್ರಕಟಗೊಂಡಿವೆ. ಇನ್ನುಳಿದ ಕೆಲವು ಶಾಸನಗಳು ಮೈಸೂರು ಆರ್ಕ್ಯಾಲಾಜಿಕಲ್ ರಿಪೋರ್ಟ್ ಹಾಗೂ ಇನ್ನಿತರ ಕೃತಿಗಳಲ್ಲಿ ಪ್ರಕಟಗೊಂಡಿವೆ. ಎಫಿಗ್ರಾಫಿಯ ಕರ್ನಾಟಿಕ ಸಂಪುಟ-೧೧ರಲ್ಲಿ ಪ್ರಕಟಗೊಂಡಿರುವ ಶಾಸನಗಳನ್ನು ಪ್ರಸ್ತುತ ಅಧ್ಯಯನಕ್ಕೆ ಆಯ್ಕೆ ಮಾಡಿಕೊಂಡು ಕಣಕುಪ್ಪೆ ಪರಿಸರದ ಪ್ರಮುಖವಾದ ಹದಿನಾಲ್ಕು ಶಾಸನಗಳ ಪಾಠವನ್ನು ಅಧ್ಯಯನ ಮಾಡಲಾಗಿದೆ.

ಅಸಗೋಡು ಗ್ರಾಮದ ಕೆರೆ ಏರಿಯ ಮೇಲಿರುವ ಈ ವೀರಗಲ್ಲು ಶಾಸನ ಕ್ರಿ.ಶ. ೧೦೧೦ರದಾಗಿದ್ದು. ದಶವರ್ಮನ ಮಗ ಬಿಣಾಯಿತ ಎಂಬುವವನು ಆಳುತ್ತಿದ್ದಾಗ ಅಸಗೋಡಿನ ಗಾಮುಣ್ಡ ಅಸಗಕಾಡಚ ಎಂಬುವವನ ಮಗ ಕಾಡವಾಸನೆಂಬುವನು ಬಲತ್ಕಾರದಿಂದ ಕಿತ್ತೂರಿನ ಗೋವುಗಳನ್ನು ಹೊಯ್ಯುತ್ತಿದ್ದಾಗ ಅವುಗಳನ್ನು ಬಿಡಿಸಿಕೊಂಡು ಬರಲು ಹೋಗಿ ಹೋರಾಡಿ ಸತ್ತನೆಂಬ ಸಂಗತಿ ಬರುತ್ತದೆ. ಈ ಶಾಸನದಲ್ಲಿ ಅಸಗೋಡಿನ ಪ್ರಾಚೀನ ಹೆಸರು ಅಸಗಗೋಡು ಎಂದು ಬರದಿರುವುದನ್ನು ನೋಡಬಹುದು.

ಅಸಗೋಡು ಕಡ್ಲೆ ಬಸಪ್ಪದೇವಾಲಯ ಮುಂದೆ ನೆಟ್ಟಿರುವ ಈ ಶಾಸ ಕ್ರಿ.ಶ. ೧೦೫೪ರಲ್ಲಿ ಕಲ್ಯಾಣಿ ಚಾಲುಕ್ಯರ ಚಕ್ರವರ್ತಿ ತ್ರೈಲೋಕ್ಯ ಮಲ್ಲನ ಕಾಲದಲ್ಲಿ ಅವನ ಅಧೀನನಾಗಿ ನೊಳಂಬ ಪಲ್ಲವ ವಂಶದವನಾದ ನಾರಸಿಂಗದೇವ ಎಂಬುವವನ ಮಗನಾದ ಬೋರಯ್ಯದೇವನು ಉಚ್ಚಂಗಿ ೩೦ರ ಪ್ರಾಂತವನ್ನು ಆಳುತ್ತಿದ್ದಾಗ ಅವನು ಕದಂಬಳಿಗೆ ಸಾವಿರದ ನಾಡಿನ ಮನ್ನಯನಾದ ನಾಗತಿಯರಸನೋ ಸೇರಿ ಅಸಗೋಡಿನ ಸ್ವಯಂಭುದೇವರಿಗೆ ವಿವಿಧ ಭೂಮಿಗಳನ್ನು ಧಾನವಾಗಿ ನೀಡಿದರು, ಈ ದೇವಾಲಯವು "ಕಾಳಮುಖಸ್ಥಾನ ನೈಷ್ಠಿಕ ವೇದಿಕರ್ತರ ಮಠ" ಆಗಿದ್ದಂತೆ ಶಾಸನವು ವರ್ಣಿಸುತ್ತದೆ. ಅಷ್ಟೇ ಅಲ್ಲ ಈ ದೇವಾಲಯದ ನಿರ್ಮಾಣದ ಹಿನ್ನೆಲೆಯನ್ನು ಕೂಡ ಅದು ಬಣ್ಣಿಸುತ್ತದೆ. ಶಿವನು ಮೂರು ಪರ್ವತದಿಂದ ಕೆಳಗಿಳಿದು ಬಂದು ದಕ್ಷಿಣ ಭಾಗದ ಭೂಮಿಯೆಲ್ಲ ಇದೆ ಸಾರವತ್ತಾದದ್ದು ಎಂದು ನಿರ್ಣಯಿಸಿ ಈ ಅಸಗೋಡಿನಲ್ಲಿ ಸ್ವಯಂಭುವಾಗಿ ನೆಲೆಸಿದಂತೆ ತ್ರೈಲೋಕ್ಯಕರ್ತರ ಎಂಬ ಯತಿಗೆ ಕನಸಾಯಿತಂತೆ ಅದರಂತೆ ಅವನು ಈ ದೇವಾಲಯ ನಿರ್ಮಿಸಿರುವನೆಂದು, ಈ ಕರ್ತಾರ ಯತಿ ಅತ್ಯಂತ ಮಹಿಮಾಪುರುಷನಾಗಿದ್ದನೆಂದೂ ಈ ಶಾಸನ ಕಾವ್ಯಮಯವಾಗಿ ವರ್ಣಿಸುತ್ತದೆ. ಶಾಸನದ ಕಡೆಯಲ್ಲಿ ಈ ದೇವಾಲಯವನ್ನು ನಿರ್ಮಿಸಿರುವ ಸೂತ್ರದಾರಿ ಶಿಲ್ಪ ಅಬ್ಬೊಜ ಎಂಬುವವನಿಗೆ ಒಂದು ಮತ್ತರ ಗದ್ದೆಯನ್ನು ಹನ್ನೆರಡು ಮತ್ತರ ಬೆದ್ದಲು ಭೂಮಿಯನ್ನು ನೀಡಲಾಯಿತು ಎಂದು ಹೇಳಿದೆ. ಧಾರ್ಮಿಕ ಮತ್ತು ಸಾಹಿತ್ಯದ ಇತಿಹಾಸ ದೃಷ್ಟಿಯಿಂದ ಪ್ರಮುಖವಾದ ಶಾಸನ ಕೊನೆಯಲ್ಲಿ ಶಾಪಾಶಯವನ್ನು ನೋಡಬಹುದು.

ಅಸಗೋಡು ಗ್ರಾಮದ ಶಂಭುಲಿಂಗೇಶ್ವರ ದೇವಾಲಯದ ಮುಂದೆ ಇರುವ ಈ ಶಾಸನ ಕ್ರಿ.ಶ.೧೧೧೦ರಲ್ಲಿ ಚಾಲುಕ್ಯ ವಿಕ್ರಮಾದಿತ್ಯ ರಾಜ್ಯವಾಳುತ್ತಿರುವಾಗ ಮಹಾಸಾಮಂತ ಸುಧರಸ

ನೊಳಂಬವಾಡಿ ೩೬೦೦ನ್ನು ನೋಡಿಕೊಳ್ಳುತ್ತಿದ್ದ ಸಮಯದಲ್ಲಿ ಕದಂಬಳಿಗೆ ೧೦೦೦ದಲ್ಲಿ ೫೦೦ ಅನ್ನ ವರ್ಗಡಿ ನೋಡಿಕೊಳ್ಳುತ್ತಿದ್ದ ಕಾಲದಲ್ಲಿ ಕ್ರಿ.ಶ ೧೧೯೮ರಲ್ಲಿ ಉಚ್ಚಂಗಿ ೩೦ರ ಬಳಿಯ ಅಸಗೋಡು ಶ್ರೀ ಸ್ವಯಂಭು ಕಲಿದೇವಸ್ವಾಮಿಗೆ ಭೂದತ್ತಿ ನೀಡಲಾಗಿದೆ. ಶಾಸನದ ಕೊನೆಯಲ್ಲಿ ಶಾಪಾಶಯ ಇದೆ.

ಅಸಗೋಡು ಗ್ರಾಮದ ಶಂಭುಲಿಂಗೇಶ್ವರ ದೇವಾಲಯದ ಮುಂದಿರುವ ಈ ಶಾಸನ ಕ್ರಿ.ಶ. ೧೧೧೧ರಲ್ಲಿ ಚಾಲುಕ್ಯ ತ್ರಿಭುವನ ಮಲ್ಲ ರಾಜ್ಯವಾಳುತ್ತಿರುವಾಗ ಶ್ರೀಮಾನ್ ಮಹಾಮಂಡಳೇಶ್ವರ ಪಾಂಡ್ಯದೇವ ನೋಳಂಬವಾಡಿ ೩೬೦೦೦ದಲ್ಲಿ ಆಳ್ವಿಕೆ ನಡೆಸುತ್ತಿದ್ದು. ಆಗ ಮಹಾಸಾಮಂತ ಮಲ್ಲರಸ ನೋಳಂಬವಾಡಿ ೩೬೦೦೦ದ ಪರ್ಜಂಕವನ್ನು ನೋಡಿಕೊಳ್ಳುತ್ತಿದ್ದ. ಈತನೊಂದಿಗೆ ಪೆರ್ಗಡೆ ಹೆಮ್ಮಸೆಯಣ ಈ ಕದಂಬಗಳಿಗೆ ಸಾವಿರದಲ್ಲಿರುವ ಪರ್ಜಂಕದಲ್ಲಿ ಆಳ್ವಿಕೆ ನಡೆಸುತ್ತಿದ್ದ ಕ್ರಿ.ಶ.೧೧೧೧ರಲ್ಲಿ ಅಸಗೋಡು ಶ್ರೀ ಸ್ವಯಂಭು ಕಲಿದೇವರಿಗೆ ಅಡಿಕೆ, ಭೋಗಿ, ಧೂಪ, ದೀಪ, ನೈವೇಧ್ಯ, ಖಂಡ, ಸ್ಫುಟಿಕೆ ಕಾಣಿಕೆಯಾಗಿ ಪೇರ್ಜಂಕದಲ್ಲಿ ಅಡಿಕೆ, ಬಳೆ, ಎಲೆ, ಇತ್ಯಾದಿಗಳ ಸುಂಕ ಬಿಟ್ಟು ಬಗ್ಗೆ ಶಾಸನ ತಿಳಿಸಿದೆ.

ಬಿಳಿಚೋಡು ಗ್ರಾಮದ ಈಶ್ವರ ದೇವಾಲಯದ ಮುಂದೆ ಇದ್ದು ಕ್ರಿ.ಶ.೧೦-೧೧ ಶತಮಾನದಲ್ಲಿ ಕಲ್ಯಾಣಿ ಚಾಲುಕ್ಯರ ಕಾಲದಲ್ಲಿನ ಈ ಶಾಸನ ಜಗಳೂರು ತಾಲ್ಲೂಕಿನ ಅತಿ ಪ್ರಾಚೀನ ಶಾಸನಗಳಲ್ಲಿ ಒಂದು. ಇದರಲ್ಲಿ ಮಡಿವಾಳ ಕೇತ ಎಂಬ ವೀರನೊಬ್ಬ ಕಾಳಗದಲ್ಲಿ ಮಡಿದಿದ್ದಕ್ಕೆ ನಿಲ್ಲಿಸಲಾಗಿರುವ ಈ ಸ್ಮಾರಕ ಅವನ ಅರವತ್ತು ಒಕ್ಕಲಪುತ್ರ ಎನೊರ್ವರ ಗಂಧಾವಾರಣ (ಆನೆ) ಬಲ್ಲ ಮಾನರ್ವರ ಪತಿ ಆಗಿದ್ದನೆಂದು ವರ್ಣಿಸುತ್ತದೆ. ಅವನು ಹೆಮ್ಮನ ಬೇತೂರಿನ ಕೇತ ಗಾವಣ್ಣ ಎಂಬುವನೊಂದಿಗೆ ಹೋರಾಡಿ ಜಯ ಪಡೆದು ಇವನ ಕುಟುಂಬದವರಿಗೆ ಬಿಣ್ಣಚೇಡಿನ (ಬಳಿಚೋಡಿನ) ಬಿತ್ತುಚ ಗಾವುಣ್ಣ ದತ್ತಿ ನೀಡಿದವನೆಂದೂ ತಿಳಿಸುತ್ತದೆ. ಪ್ರೊ.ಬಿ.ರಾಜಶೇಖರಪ್ಪರವರು ಶಾಸನವನ್ನು ಪುನರ್ ಪರಿಶೀಲಿಸಿ ಬಿಳಿಚೋಡಿನ ಪ್ರಾಚೀನ ರೂಪ ಬಿಣ್ಣಚೇಡು ಆಗಿತ್ತೆಂದು ತಿಳಿಸಿದ್ದಾರೆ.

ಬಿಳಿಚೋಡು ಗ್ರಾಮದ ಈಶ್ವರ ದೇವಾಲಯದ ಮುಂದಿರುವ ಈ ಶಾಸನ ಕಲ್ಯಾಣಿ ಚಾಲುಕ್ಯರ ಕಾಲದ ಕ್ರಿ.ಶ. ಸುಮಾರು೧೧ ಶತಮಾನದ್ದಾಗಿದೆ. ಶಾಸನ ಶಿಥಿಲಗೊಂಡಿರುವುದರಿಂದ ವಿಷಯ ಅಸ್ಪಷ್ಟವಾಗಿದೆ. ಇದು ಯಾವುದೇ ಒಂದು ದೇವದಾನವನ್ನು ಕಾಳಮುಖ ಪಾಶುಪತ ಪಂಥದ ಆಚಾರ್ಯನೊಬ್ಬರಿಗೆ ನೀಡಿದ ವಿಷಯವನ್ನು ತಿಳಿಸುತ್ತದೆ. ದೇವಾಲಯದ ಹಿಂದೆಯೇ ಇದ್ದ ೭೦೦ ಮರಗಳ ತೋಟ ಸೇರಿದಂತೆ ಬೆದ್ದಲು ಭೂಮಿಯನ್ನು ದತ್ತಿ ನೀಡಲಾಗಿದೆ. ಗದ್ದೆಯ ಕರವನ್ನು ತಿಳಿಸಿದೆ ಕೊನೆಯಲ್ಲಿ ಶಾಪಾಶಯ ಇದೆ.

ಚದುರುಗೊಳ ಗ್ರಾಮದ ಕಲ್ಲೇಶ್ವರ ದೇವಸ್ಥಾನದ ಬಾಗಿಲಬಳಿ ಇರುವ ಈ ಶಾಸನದಲ್ಲಿ ಕ್ರಿ.ಶ. ೧೧೬೭ರಲ್ಲಿ ಕಲ್ಯಾಣಿ ಚಾಲುಕ್ಯ ಚಕ್ರವರ್ತಿಗಳು ಅಧೀನ ದೊರೆಯಾದ ವಿಜಯ ಪಾಂಡ್ಯದೇವನ ಕಾಲದಲ್ಲಿ ಅವನ ಸಾಮಂತರೂ ಅನೇಕ ಬಿರುದಾಂಕಿತರೂ ಆದ ಸೋವಿದೇವನಾಯಕ, ಬರ್ಮದೇವ ನಾಯಕ ಎಂಬುವರು ಶ್ರೀ ವೀರಪಾಂಡ್ಯ ಚತುರ್ವೇದಿ ಮಂಗಲಚಿಂತೇರಿಯ ಅಗ್ರಹಾರದಲ್ಲಿ ಶೈವ

ದೇವಾಲಯವೊಂದರ ಸಲುವಾಗಿ, ಮಹಾಕುಳ ಮುಖಿವೃತಿಗಳಾಗಿದ್ದ ತೇಜೋನಿಧಿ ಪಂಡಿತದೇವರ ಮಗನಾದ ಸರ್ವೇಶ್ವರ ಪಂಡಿತ ದೇವರಿಗೆ ಸ್ಥಾನಪತಿ ಸ್ಥಾನವನ್ನು ಒಪ್ಪಿಸಿ ಕೆಲವೊಂದು ಕೆರೆ ನೀರಿನ ನೀರಾವರಿಯಿದ್ದ ಗದ್ದೆ ಭೂಮಿಗಳನ್ನು ನೀಡಿದರೆಂದು ಅದರಿಂದ ತಿಳಿಯುತ್ತದೆ. ಶಾಸನ ಹೇಳುವ ಶ್ರೀ ವೀರ ಪಾಂಡ್ಯ ಚತುರ್ವೇದಿ ಮಂಗಲವಾದ ಚಿಂತೇರಿಯು ಪ್ರಸ್ತುತ ಚದುರುಗೊಳ ಗ್ರಾಮವಾಗಿದ್ದಿರಬಹುದು.

ಕಲ್ಲೇದೇವರಪುರ ಗ್ರಾಮದ ಕಲ್ಲೇಶ್ವರ ದೇವಾಲಯದ ಒಳಗೆ ಇರುವ ಈ ಶಾಸನ ಕ್ರಿ.ಶ. ೧೨೦೧ರಲ್ಲಿ ಯಾದವ ಅಥವಾ ಸೇವುಣ ಚಕ್ರವರ್ತಿ ರಾಮಚಂದ್ರ ದೇವನ ಕಾಲದಲ್ಲಿ ಈ ಊರಿನಲ್ಲಿದ್ದ ಪ್ರಸಾದಿದೇವ ಎಂಬ ಪ್ರಸಿದ್ಧ ಶೈವಗುರುವೊಬ್ಬನಿಗೆ ರಾಜನ ಸಾಮಂತನಾದ ಹೆಮ್ಮಾಡಿದೇವ ಎಂಬುವನು, ರಾಜನಿಗೆ ಪುತ್ರೋತ್ಸವವಾದ ಸಂತೋಷಕ್ಕಾಗಿ, ಅನೇಕ ಪ್ರಮುಖರ ಸಮಕ್ಷಮದಲ್ಲಿ ಕೆಲವು ಭೂದತ್ತಿಗಳನ್ನು ನೀಡಿದ್ದನ್ನು ಈ ಶಾಸನ ನಿರೂಪಿಸುತ್ತದೆ. ಈ ಶಾಸನದ ಮೊದಲ ಭಾಗದಲ್ಲಿ ಪ್ರಸಾದಿ ದೇವನ ಉಜ್ವಲ ವ್ಯಕ್ತಿತ್ವವು ವರ್ಣಿಸಲ್ಪಟ್ಟಿದೆ. ಸೇವುಣ ವಂಶದ ದೊರೆ ರಾಮಚಂದ್ರನು ಗುರ್ಜರ ತೆಲುಂಗ ವರಾಟ ಶ್ರೀರಂಗ ಬಲ್ಲಾಳ ಮಾಳವ, ಮುಂತಾದ ರಾಜರುಗಳ ಮೇಲೆ ವಿಜಯ ಸಾದಿಸಿದ್ದವನೆಂದು ಹೇಳುವ ಶಾಸನದ ವಿವರ ರಾಜಕೀಯ ಚರಿತ್ರೆಗೂ ಉಪಯುಕ್ತ ಅಂಶಗಳನ್ನು ನೀಡುತ್ತದೆ.

ಕಲ್ಲೇದೇವರಪುರ ಗ್ರಾಮದ ಕಲ್ಲೇಶ್ವರ ದೇವಾಲಯದ ಒಳಗೆ ಇರುವ ಶಾಸನ ಕ್ರಿ.ಶ. ೧೨೩೫ರಲ್ಲಿ ಹೊಯ್ಸಳ ಚಕ್ರವರ್ತಿ ವೀರ ಸೋಮೇಶ್ವರದೇವನ ಕಾಲದಲ್ಲಿ ಸೊಳುಗಲ್ಲು ೭೦ರ ನಾಡಿಗೆ ಸೇರಿದ ಬೆಮ್ಮತ್ತನೂರಿನ (ಚಿತ್ರದುರ್ಗ)ಲ್ಲಿ ನಾರಸಿಂಗನಾಯಕ ಮಲ್ಲಯ್ಯನಾಯಕರು ಧರ್ಮಕಥಾ ಪ್ರಸಂಗವೊಂದರಲ್ಲಿ ದಾನದ ಮಹತ್ವವನ್ನು ಕೇಳಿ, ಸ್ವಯಂಭು ಮಣಲೇಶ್ವರದೇವರ ಸೇವಾರ್ಥವಾಗಿ ತಾವೂ ದಾನ ಕೊಡಲು ನಿಶ್ಚಯಿಸಿ, ಕಾಳಾಮುಖ ಪಾಶುಪತ ಗುರುವೊಬ್ಬನ ಕಾಲನ್ನು ತೊಳೆದು ಭೂದಾನವಿತ್ತಿದ್ದನ್ನು ತಿಳಿಸುತ್ತದೆ. ಆ ಭೂದಾನವು ಈ ಗ್ರಾಮಕ್ಕೆ ಸೇರಿದ ಒಂದು ಭೂಮಿಯಾಗಿದ್ದುದರಿಂದ ಈ ಶಾಸನವನ್ನು ಇಲ್ಲಿ ಹಾಕಿಸಿದ್ದಿರಬೇಕು. ಆದರೆ ಸ್ವಯಂಭು ಮಣಲೇಶ್ವರದೇವರು ಇಲ್ಲಿಯ ಕಲ್ಲೇಶ್ವರದೇವರ ಇನ್ನೊಂದು ಹೆಸರೋ ಅಥವಾ ಅದೇ ಬೇರೆಯದೋ ತಿಳಿಯದು. ಹೊಯ್ಸಳ ವೀರಸೋಮೇಶ್ವರನ ಕಾಲಕ್ಕೆ ಸೇರಿದಂತೆ ಜಿಲ್ಲೆಯಲ್ಲೇ ಅತ್ಯಂತ ಪ್ರಾಚೀನ, ಶಾಸನ ಎನ್ನಲಾಗಿದೆ. ಅವನು ಚೋಳ ಪಾಂಡ್ಯ ರಾಜ್ಯಗಳ ಮೇಲೆ ದಂಡೆತ್ತಿ ಹೋಗಿ ಅವರ ಮೇಲೆ ಬಿದ್ದು ವಿಜಯ ಸಾಧಿಸಿದ್ದನೆಂದು ಈ ಶಾಸನ ಸೂಚಿಸುತ್ತದೆ.



ಕೊಡದಗುಡ್ಡದ ವೀರಭದ್ರ ದೇವಾಲಯದ ಹಿಂದಿ ನಟ್ಟಿರುವ ಕಲ್ಲಿನಲ್ಲಿರುವ ಶಾಸನವು ಕ್ರಿ.ಶ. ೧೫೨೩ರ ಕಾಲದ್ದಾಗಿದೆ. ಇದರಲ್ಲಿ ವಾರಣಾಸಿಯ (ಕುಶ) ಸಿದ್ಧ ಬಿಕ್ಷಾವರ್ತಿಒಡೆಯರು, ಭದ್ರದೇವಒಡೆಯರು ಇವರ ಆಜ್ಞಾಧಾರಕವಾದ ಅರವತ್ತು ಒಕ್ಕಲ ಸಂಬಂಧ ಸದಾಶಿವಯೋಗಿ ಒಡೆಯರ ಮಕ್ಕಳು ಚೆನ್ನಯಾಗಿ ಒಡೆಯರು ವೀರಭದ್ರ ಸೇವೆಗಾಗಿ ಹೊನ್ನು ಸಲ್ಲುವಂತೆ ನಂದಾದೀವಿಗೆ ನೀಡಿದ ವಿವರ ತಿಳಿಸುತ್ತದೆ. ಕೊಡದಗುಡ್ಡದ ಪ್ರಾಚೀನ ರೂಪ "ಕೊಟ್ಟ" ಎಂದಿದ್ದು ನಂತರ ಅದು ಕೊಟ್ಟದಗುಡ್ಡ ಆಗಿ ನಂತರ ಕೊಡ್ಡದಗುಡ್ಡ ಆಗಿದೆ ಎಂದು ತಿಳಿಯುತ್ತದೆ.

ಬಿಳಿಚೋಡು ಗ್ರಾಮದ ಈಶ್ವರ ದೇವಾಲಯದ ಬಾಗಿಲಿನ ಪೂರ್ವದ ಕಡೆ ನಟ್ಟಿರುವ ಕಲ್ಲಿನಲ್ಲಿರುವ ಶಾಸನವು ಕ್ರಿ.ಶ. ೧೫೨೩ ರ ಕಾಲದ್ದಾಗಿದೆ. ಇದು ಒಂದು ದಾನ ಶಾಸನವಾಗಿದ್ದು, ಇದರಲ್ಲಿ ಕೃಷ್ಣದೇವರಾಯನ ಹೆಸರನ್ನು ಉಲ್ಲೇಖಿಸಲಾಗಿದೆ. ಈ ಶಾಸನದಲ್ಲಿ ಬಿಳಿಚೋಡು ರಾಮದೇವರ ವಿನಿಯೋಗಕ್ಕೆ ಬಿಳಿಚೋಡು ಹಮುದಾರ ಉತ್ತರ ಮಕ್ಕಳು ಒಂದು ಕೋಟೆ ಗ್ರಾಮವನ್ನು ದಾನ ಕೊಟ್ಟ ವಿವರ ಇದೆ.

ಬಿಳಿಚೋಡು ಈಶ್ವರ ದೇವಾಲಯದ ಮುಂದಿನ ಕಂಬದಲ್ಲಿರುವ ಶಾಸನದಲ್ಲಿ ವಿಜಯನಗರ ತುಳು ವಂಶದ ಕ್ರಿ.ಶ. ೧೫೫೩ರಲ್ಲಿ ಕೃಷ್ಣನಾಯಕನ ಕಾರ್ಯಕರ್ತನಾದ ದಮ್ಮಪ್ಪನಾಯಕರು ಬಿಳಿಚೋಡು ಸೀಮೆಯಲ್ಲಿ ಕುರಿಯ ಮೇಲಿನ ತೆರಿಗೆಯನ್ನು ವಜಾಗೊಳಿಸಿದ ವಿವರ ಇದೆ.

ಬಿಳಿಚೋಡು ಗ್ರಾಮದ ಈಶ್ವರ ದೇವಾಲಯದ ಪಶ್ಚಿಮ ಕಂಬದಲ್ಲಿರುವ ಈ ಶಾಸನ ವಿಜಯನಗರ ಸಾಮ್ರಾಜ್ಯದ ಕೃಷ್ಣದೇವರಾಯನ ಕಾಲದಲ್ಲಿ ಕ್ರಿ.ಶ.ಸು. ೧೫-೧೬ನೇ ಶತಮಾದಲ್ಲಿ ಬಿಳಿಚೋಡು ರಾಮದೇವರಿಗೆ ಬೆಲೂರು ರಾಮಪ್ಪನಾಯಕರು ಸ್ತಾನಿಕ ಮಾದೇವಪ್ಪ ದಾನ ಮಾಡಿದ್ದಾರೆ. ಇದನ್ನು ಮೀರಿದರೆ ವಾರಣಾಸಿಯಲ್ಲಿ ಗೋಹತ್ಯೆ ಮಾಡಿದ ಪಾಪಕ್ಕೆ ಹೋಗುವರು ಎಂಬ ಶಾಪಾಶಯ ಇದೆ.

ಕೊಡದ ಗುಡ್ಡದ ಕೆಳಗೆ ಕಗ್ಗಲಿ ಮರೆದ ಬುಡದಲ್ಲಿರುವ ಈ ಶಾಸನ ಕ್ರಿ.ಶ.ಸುಮಾರು ೧೬-೧೭ನೇ ಶತಮಾನದಲ್ಲಿ ವಿಜಯನಗರ ಕಾಲದ್ದಾಗಿದೆ. ಶಾಸನದ ಆರಂಭದ ಭಾಗ ಶಿಥಿಲಗೊಂಡಿದೆ. ಈಗ ಕಾಣಿಸಿದ ಪ್ರಾರಂಭದಲ್ಲಿ ಶಾಪಾಶಯ ಕಾಣುವುದು. ತಂದೆ ತಾಯಿಯನ್ನು ವಾರಣಾಸಿಯಲ್ಲಿ ಕೊಂದ ಪಾಪಕ್ಕೆ ತನ್ನ ಹೆಂಡತಿಯನ್ನು ಹೊಲೆಮಾದಿಗರಿಗೆ ಕೊಟ್ಟು ಹಾಗೂ ಹೊಲೆಮಾದಿಗ ಬಸುರು ಹುಟ್ಟಿದಂತೆ ಎಂಬ ವಿಷಯದಿಂದ ಆರಂಭವಾಗಿದೆ. ಕೃಷ್ಣದೇವರಾಯ ಮದುವೆಯ ಸುಂಕ ಬಿಡಿಸಿದ ಬಗ್ಗೆ ತಿಳಿಸಿದೆ.

## ಶಿಲ್ಪಗಳು

ಕಣಕುಪ್ಪೆ ಪರಿಸರದಲ್ಲಿ ಚಾಲುಕ್ಯರ ಕಾಲದಿಂದ ಹಿಡಿದು ಪಾಳೆಯಗಾರರ ಕಾಲದವರೆಗಿನ ಸಾಕಷ್ಟು ಶೈವ, ವೈಷ್ಣವ, ಶಾಕ್ತ ದೇವಾಲಯಗಳನ್ನು ಕಾಣುತ್ತೇವೆ. ಈ ದೇವಾಲಯಗಳ ಒಳಗೆ, ಹೊರಗೆ, ಊರ ನಡುವೆ ಅನೇಕ ಶಿಲ್ಪಗಳನ್ನು ನೋಡುತ್ತವೆ. ಅವುಗಳೆಲ್ಲಿ ಪ್ರಮುಖವಾಗಿ ಶೈವ, ವೈಷ್ಣವ, ಶಾಕ್ತ, ವೀರಗಲ್ಲು, ಮಹಾಸತಿಗಲ್ಲುಗಳು ಎಂದು ವಿಭಾಗಿಸಿ, ಅವುಗಳಲ್ಲಿ ಪ್ರಮುಖವಾದ ಶಿಲ್ಪಗಳ ಕಾಲಮಾನ ಅವುಗಳ ವಿವರಗಳನ್ನು ಈ ಕೆಳಗಿನಂತೆ ಅಧ್ಯಯನ ಮಾಡಲಾಗಿದೆ.

ಕಣಕುಪ್ಪೆ ಕೋಟೆಯೊಳಗಿನ ಕ್ರಿ.ಶ.ಸುಮಾರು ೧೬-೧೭ನೇ ಶತಮಾನದ ನಂದಿ ಶಿಲ್ಪವು ೧೬x೧೭ ಇಂಚು ವಿಸ್ತೀರ್ಣದ್ದಾಗಿದ್ದು. ಮರಳು ಮಿಶ್ರಿತ ಕಲ್ಲಿನಲ್ಲಿದೆ, ನಂದಿಯನ್ನು ಕುಳಿತ ಹಾಗೆ ತೋರಿಸಿದೆ. ದೊಡ್ಡ ಭುಜ, ಭುಜದ ಮೇಲೆ ಘಂಟಸರ, ಕೊರಳಿಗೆ ಹಾರ ಹಾಕಿದೆ. ಕಿವಿಯಲ್ಲಿ ಕಿವಿಯೊಲೆ ಇದೆ. ಇದನ್ನು ಒಂದು ಮರದ ಕೆಳಗೆ ಇಡಲಾಗಿದೆ.

ಕೊಡದ ಗುಡ್ಡದ ಕೆರೆ ಏರಿಯ ಹಿಂದಿನ ದೇವಾಲಯದಲ್ಲಿರುವ ಭೈರವ ಕ್ರಿ.ಶ. ೧೭-೧೮ನೇ ಶತಮಾನದ್ದಾಗಿದ್ದು, ೨೧x೨೧ ಇಂಚು ವಿಸ್ತೀರ್ಣ ಹೊಂದಿದೆ. ಈ ಶಿಲ್ಪವನ್ನು ಕಪ್ಪುಕಲ್ಲಿನಲ್ಲಿ ಕೆತ್ತಲಾಗಿದೆ. ನಾಲ್ಕು ಕೈಗಳನ್ನು ಹೊಂದಿದ್ದು ಕುಳಿತಿರುವ ಭಂಗಿಯಲ್ಲಿದೆ, ಕೈಗಳಲ್ಲಿ ಕ್ರಮವಾಗಿ ಖಡ್ಗ, ತ್ರಿಶೂಲ, ಡಮರು, ಕಪಾಲುಗಳನ್ನು ಹಿಡಿದಿರುವನು, ವಿವಿಧ ರೀತಿಯ ಆಭರಣಗಳಿಂದ ಅಲಂಕೃತವಾಗಿದ್ದು ಸೊಂಟಪಟ್ಟಿ, ಕೊರಳಹಾರ, ಕಿವಿಯೊಲೆಗಳನ್ನು ಧರಿಸಿದ್ದಾನೆ. ಗುಂಗರು ಕೂದಲು ಇದ್ದು, ನಗ್ನವಾಗಿರುವುದು. ಶಿಲ್ಪದ ಹಿಂದೆ ಪ್ರಭಾವಳಿ ಇದ್ದು, ಸಾಮಾನ್ಯವಾಗಿ ಭೈರವನ ಶಿಲ್ಪವನ್ನು ಸ್ಥಾನಿಕ ಭಂಗಿಯಲ್ಲಿ ನೋಡುತ್ತೇವೆ. ಆದರೆ ಇದು ಕುಳಿತ ಭಂಗಿಯಲ್ಲಿದೆ.

ಅಸಗೋಡು ಗ್ರಾಮದ ಶಂಭುಲಿಂಗೇಶ್ವರ ದೇವಾಲಯದ ಮುಂದೆ ಇರುವ ವೀರಭದ್ರ ಶಿಲ್ಪವು ಕ್ರಿ.ಶ. ೧೪-೧೫ ನೇ ಶತಮಾನದ್ದಾಗಿದೆ. ಶಿಲ್ಪವು ನಾಲ್ಕು ಕೈಗಳನ್ನು ಹೊಂದಿದ್ದು, ಕ್ರಮವಾಗಿ ಕತ್ತಿ, ಬಾಣ, ಬಿಲ್ಲು, ಗುರಾಣಿಗಳನ್ನು ಹಿಡಿದಿರುವನು ಕೊರಳಿಗೆ ರುದ್ರಾಕ್ಷಿಹಾರ, ರುಂಡಮಾಲೆಗಳನ್ನು. ಧರಿಸಿರುವನು ಕಿವಿಯಲ್ಲಿ ಕಿವಿಯೊಲೆ, ತಲೆಗೆ ಕೀರಿಟ ಮೊಳಕಾಲವರೆಗೆ ಕಟಿ ವಸ್ತ್ರಧಾರಿಯಾಗಿರುವನು. ಶಿಲ್ಪದ ಸುತ್ತಲೂ ಪ್ರಭಾವಳಿ ಇದೆ.

ಬಿಳಿಚೋಡು ಗ್ರಾಮದ ಗಣೇಶ ದೇವಾಲಯದ ಗರ್ಭಗುಡಿಯಲ್ಲಿ ಪ್ರತಿಷ್ಠಾಪಿಸಲಾಗಿರುವ ಗಣೇಶ ಶಿಲ್ಪವು ಕ್ರಿ.ಶ. ೧೩-೧೪ ನೇ ಶತಮಾನದಾಗಿದ್ದು ಪೀಠದ ಮೇಲೆ ಕುಳಿತಿರುವ ಭಂಗಿಯಲ್ಲಿದೆ. ನಾಲ್ಕು ಕೈಗಳನ್ನು ಹೊಂದಿದ್ದು, ಕ್ರಮವಾಗಿ ದಂತ, ಆಯುಧ, ಅಂಕುಶ ಹಾಗೂ ಫಲ ಹಿಡದಿರುವನು. ವಿವಿಧ ರೀತಿಯ ಆಭರಣಗಳಿಂದ ಕೊರಳಹಾರ, ಕಾಲುಕಡಗ, ಕಿವಿಯೊಲೆಗಳಿವೆ. ಶಿಲ್ಪದ ಹಿಂದೆ ಪ್ರಭಾವಳಿ ಇದ್ದು ಜಲಾಹರಿ ಇರುವುದನ್ನು ಕಾಣುತ್ತೇವೆ.

ಕೊಡದ ಗುಡ್ಡದ ವೀರಭದ್ರ ದೇವಾಲಯದ ಗರ್ಭಗುಡಿಯ ಬಂಡೆಯಲ್ಲಿ ವೀರಭದ್ರ ಮೂರ್ತಿಯು ಕ್ರಿ.ಶ. ೧೫ ನೇ ಶತಮಾನದಾಗಿದೆ. ಬಳಪದ ಶಿಲೆಯಲ್ಲಿರುವ ಈ ಮೂರ್ತಿಯನ್ನು ಗರ್ಭಗುಡಿಯ ಹಿಂಭಾಗದ ನೈಸರ್ಗಿಕ ಬಂಡೆಯಲ್ಲಿ ಕೆತ್ತಲಾಗಿದೆ. ಇದು ಉಬ್ಬು ಶಿಲ್ಪವಾಗಿದ್ದರೂ ಸಹ ಪ್ರತ್ಯೇಕವಾಗಿ ಕೆತ್ತಲಾಗಿದೆ. ಕೀರಿಟಧಾರಿಯಾಗಿರುವ ಈ ಮೂರ್ತಿ ಚತುರ್ಭುಜಧಾರಿಯಾಗಿದ್ದು ಮೇಲಿನ ಬಲಗೈಯದಲ್ಲಿ ತ್ರಿಶೂಲ ಕೆಳಗಿನ ಬಲಗೈಯಲ್ಲಿ ಸೊಂಟಕ್ಕೆ ಸಿಕ್ಕಿಸಿದ ಕಠಾರಿಯನ್ನು ಹಿಡಿದಿದೆ. ಮೇಲಿನ ಎಡಗೈಯಲ್ಲಿ ಧನಸ್ಸು, ಕೆಳ ಎಡಗೈಯಲ್ಲಿ ಡಮರುಗಳನ್ನು ಹಿಡಿದು ಸ್ಥಾನಿಕವಾಗಿದೆ. ಈ ಮೂರ್ತಿ ಕಿವಿಯೊಲೆ, ಸೊಂಟಪಟ್ಟಿ, ಮೊಳಕಾಲವರೆಗೆ ಕಟಿ ವಸ್ತ್ರಧಾರಿಯಾಗಿರುವುದು. ಮೂರ್ತಿ, ಕೈ ಮತ್ತು ಕಾಲ್ಕಡಗ, ಕೈಯಾರದಿಂದ ಅಲಂಕೃತವಾಗಿದೆ. ಇದರ ಲಕ್ಷಣಗಳ ಆಧಾರದ ಮೇಲೆ ವಿಜಯನಗರ ಕಾಲದ ಶಿಲ್ಪ ಎಂದು ಹೇಳಬಹುದು.

ಚದುರುಗೋಳ ಗ್ರಾಮದ ಭೈರವ ದೇವಾಲಯದ ಗರ್ಭಗುಡಿಯಲ್ಲಿ ಪ್ರತಿಷ್ಠಾಪಿಸಲಾಗಿರುವ ಭೈರವ ಶಿಲ್ಪವು ಕ್ರಿ.ಶ. ಸುಮಾರು ೯ ನೇ ಶತಮಾನದ್ದಾಗಿದೆ. ಕಪ್ಪು ಶಿಲೆಯಲ್ಲಿರುವ ಈ ಮೂರ್ತಿ

ಪಾಣಿಪೀಠದ ಮೇಲೆ ಸ್ಥಾನಿಕವಾಗಿದೆ. ಶಿಲ್ಪ ಕಿರೀಟಧಾರಿಯಾಗಿರುವುದರ ಜೊತೆಗೆ ಅಷ್ಟ ಕೈಗಳನ್ನು ಹೊಂದಿದ್ದು, ವಿವಿಧ ಆಯುಧಗಳನ್ನು ಹಿಡಿದಿದೆ. ಸರ್ಪಕುಂಡಲ, ಕೊರಳಹಾರ, ಕಂಠಾಭರಣ, ಯಜ್ಞೋಪವಿತ, ಉದರಬಂದ, ಕಟಿಬಂದ, ಮೊಳಕಾಲವರೆಗೆ ಇಳಿಬಟ್ಟ ಉಪವಿತ, ತ್ರಿಶೂಲ, ಡಮರುಗ, ಅಂಕುಶ, ಖಡ್ಗ, ಕಠಾರಿ, ಧನಸ್ಸು ಕಪಾಲ ಹಿಡಿದ ಎಂಟೂ ಕೈಗಳಿಗೂ ಕೈ ಕಡಗ ಹೊಂದಿದೆ. ಪಾದರಕ್ಷೆಗಳಿಂದ ನಗ್ನವಾಗಿ ಸರ್ಪದ ಮೇಲೆ ನಿಂತಿರುವ ಮೂರ್ತಿ ಇದಾಗಿದೆ. ಎಡಗಾಲ ಮುಂಭಾಗದಲ್ಲಿ ಸರ್ಪ ಹೆಡೆಬಿಚ್ಚಿ ಹಿಂಭಾಗಕ್ಕೆ ತನ್ನ ಬಾಲವನ್ನು ಚಾಚಿ ಮಲಗಿದಂತಿರುವ ಸರ್ಪದ ಮೇಲೆ ಈ ಮೂರ್ತಿ ಸ್ಥಾನಿಕವಾಗಿದೆ. ಬಲಗಾಲಿನ ಬಳಿ ವಾಧ್ಯದವರು ಎಡಗಾಲ ಬಳಿ ನಾಯಿ ಮತ್ತು ಚಿಕ್ಕ ಪುರುಷ ಶಿಲ್ಪಗಳಿವೆ. ಸುತ್ತಲೂ ಪ್ರಭಾವಳಿ ಇದ್ದು, ಪಾಣಿಪೀಠದಲ್ಲಿ ಚೇಳು ಮತ್ತು ಪದ್ಮಗಳನ್ನು ಕೆತ್ತಲಾಗಿದೆ.

ಗುತ್ತಿದುರ್ಗದ ಭೈರವೇಶ್ವರದ ಗರ್ಭಗುಡಿಯಲ್ಲಿ ಇರುವ ಭೈರವ ಶಿಲ್ಪವು ಕ್ರಿ.ಶ. ೧೧ನೇ ಶತಮಾನದ್ದಾಗಿದೆ. ಕಪ್ಪು ಶಿಲೆಯಲ್ಲಿರುವ ಶಿಲ್ಪ ಕಿರೀಟ ಮುಕುಟಧಾರಿಯಾಗಿ ಪಾಣಿಪೀಠದ ಮೇಲೆ ಸ್ಥಾನಿಕವಾಗಿದೆ. ಚತುರ್ಭುಜಧಾರಿಯಾಗಿದ್ದು ಸರ್ಪಕುಂಡಲ ಕೊರಳಲ್ಲಿ ಕಂಠಾಭರಣ, ಎದೆಹಾರ, ಯಜ್ಞೋಪವೀತ, ಕಟಿಸೂತ್ರ, ಮೊಳಕಾಲವರೆಗೆ ಇಳಿಬಿದ್ದ ರುಂಡಮಾಲೆ, ಮೊಳಕಾಲ ಮೇಲೆ ಎರಡು ಕಾಲನ್ನು ಸುತ್ತುವರಿದ ಸರ್ಪಗಳಿವೆ. ಕೈಕಡಗ, ಕೆಯೂರಗಳಿದ್ದು, ತ್ರಿಶೂಲ, ಡಮರುಗ ಖಡ್ಗ ಮತ್ತು ಪಾತ್ರೆಯೊಂದಿಗೆ ಕಪಾಲಗಳನ್ನು ಕೈಯಲ್ಲಿ ಈ ಮೂರ್ತಿ ಹಿಡದಿದೆ. ಕಾಲ್ಗಡಗ, ಪಾದರಕ್ಷೆಯನ್ನು ಧರಿಸಿದ ಈ ಮೂರ್ತಿ ನಿರ್ವಸ್ತ್ರಧಾರಿಯಾಗಿದೆ. ಈ ಮೂರ್ತಿಯ ಲಕ್ಷಣಗಳ ಆಧಾರದ ಮೇಲೆ ಕಲ್ಯಾಣಿ ಚಾಲುಕ್ಯರ ಕಾಲದ್ದೆಂದು ಹೇಳಬಹುದು.

ಅಸಗೋಡು ಕಡ್ಲೆ ಬಸಪ್ಪ ದೇವಾಲಯದ ಮುಂದೆ ಇರುವ ಶೈವದ್ವಾರಪಾಲಕ ಶಿಲ್ಪವು ಕ್ರಿ.ಶ. ೧೪-೧೫ ನೇ ಶತಮಾನದ್ದಾಗಿದೆ. ಶಿಲ್ಪವು ದೇವಾಲಯದ ಪ್ರವೇಶ ಭಾಗದಲ್ಲಿದೆ. ದ್ವಾರಪಾಲಕ ಚತುರ್ಭುಜಧಾರಿಯಾಗಿದ್ದು. ತನ್ನ ಕೈಗಳಲ್ಲಿ ಕ್ರಮವಾಗಿ, ಅಭಯ, ಡಮರು, ತ್ರಿಶೂಲ, ಗಧಾಗಳನ್ನು ಹಿಡಿದಿರುವನು, ಶಿಲ್ಪವು ಮೊಳಕಾಲವರೆಗೆ ಕಟಿವಸ್ತ್ರಧಾರಿಯಾಗಿದ್ದು, ಕೊರಳಲ್ಲಿ ಎರಡು ರೀತಿಯ ಕಂಠಹಾರ ಧರಿಸಿರುವನು, ತಲೆಯ ಕೂದಲು ಬುಜದವರೆಗೆ ಇದೆ. ಕಿವಿಯಲ್ಲಿ ಕಿವಿಯೊಲೆ ವಿವಿಧ ರೀತಿಯ ಆಭರಣ ಧರಿಸಿದ್ದು, ಶಿಲ್ಪ ಬಹಳ ಭಗ್ನಗೊಂಡಿದೆ.

ಬಿಳಿಚೋಡು ಗ್ರಾಮದ ಈಶ್ವರ ದೇವಾಲಯದ ಗರ್ಭಗುಡಿಯಲ್ಲಿ ಪ್ರತಿಷ್ಠಾಪಿಸಲಾಗಿರುವ ಶಿವಲಿಂಗವು ಕ್ರಿ.ಶ. ೧೨ನೇ ಶತಮಾನದ್ದಾಗಿದೆ. ಶಿವಲಿಂಗವು ಕಪ್ಪು ಶಿಲೆಯಲ್ಲಿದ್ದು ಪೀಠ ಮತ್ತು ಪಟ್ಟಿಯನ್ನು ಹೊಂದಿದೆ. ಪಾಣಿವಟ್ಟಲು, ಜಲಾಹರಿ, ರುದ್ರಭಾಗಗಳನ್ನು ಹೊಂದಿದ್ದು, ಶಿವಲಿಂಗವನ್ನು ದೇವಾಲಯ ಕಟ್ಟಿರುವ ಹಾಗೆ ಅದೀಷ್ಠಾನದ ಮೇಲೆ ಕೆತ್ತಲಾಗಿದೆ. ರುದ್ರಭಾಗದ ಒಂದು ಕಣ್ಣು ಕಂಚಿನಲ್ಲಿದೆ.

## ವೈಷ್ಣವ ಶಿಲ್ಪಗಳು

ಪ್ರಸ್ತುತ ಅಧ್ಯಯನ ಪ್ರದೇಶದಲ್ಲಿ ಶೈವ ಶಿಲ್ಪಗಳಂತೆ ವೈಷ್ಣವ ಶಿಲ್ಪಗಳೂ ಸಹ ಸಾಕಷ್ಟಿವೆ. ಸುಮಾರು ಕ್ರಿ.ಶ. ೭-೮ನೇ ಶತಮಾನದ ಅಂತ್ಯಭಾಗದಿಂದಲೂ ನಿರಂತರವಾಗಿ ವೈಷ್ಣವ ಶಿಲ್ಪಗಳು

ದೊರೆತಿವೆ. ಕಲ್ಯಾಣಿ ಚಾಲುಕ್ಯರು, ಹೊಯ್ಸಳರು, ಪಾಳೆಯಗಾರರ ಕಾಲದ ಅನೇಕ ಶಿಲ್ಪಗಳಿವೆ. ಅವುಗಳಲ್ಲಿ ಪ್ರಮುಖವಾದವುಗಳನ್ನು ಈ ಕೆಳಗಿನಂತೆ ಅಧ್ಯಯನ ಮಾಡಲಾಗಿದೆ.

ಬಿಳಿಚೋಡು ಈಶ್ವರ ದೇವಾಲಯದಲ್ಲಿರುವ ವಿಷ್ವಕ್ಸೇನ ಶಿಲ್ಪವು ಕ್ರಿ.ಶ. ೧೪-೧೫ ನೇ ಶತಮಾನದ್ದಾಗಿದ್ದು ಕಪ್ಪು ಶಿಲೆಯಲ್ಲಿರುವ ಶಿಲ್ಪವು ಪದ್ಮಾಸನ ಭಂಗಿಯಲ್ಲಿ ಆಸೀನವಾಗಿದೆ. ನಾಲ್ಕು ಕೈಗಳನ್ನು ಹೊಂದಿದ್ದು, ಕೈಗಳಲ್ಲಿ ಕ್ರಮವಾಗಿ ಗದೆ, ಚಕ್ರ, ಶಂಖ, ಪದ್ಮಗಳನ್ನು ಹಿಡಿದಿದೆ. ಕಿರೀಟದಾರಿಯಾದ ವಿಷ್ವಕ್ಸೇನ ಕಾಲಿಗೆ ಕೈಗೆ ಕಡಗ ಸೊಂಟಪಟ್ಟಿ, ತೊಳಬಂದಿ, ಕಂಠಹಾರ ವಿವಿಧ ಆಭರಣಗಳಿಂದ ಅಲಂಕೃತವಾಗಿದೆ. ಸುತ್ತಲೂ ಅಲಂಕೃತವಾದ ಪ್ರಭಾವಳಿ ಇದೆ.

ಬಿಳಿಚೋಡು ಈಶ್ವರ ದೇವಾಲಯದ ಒಳಗೆ ಇರುವ ಲಕ್ಷ್ಮೀ ನಾರಾಯಣ ಶಿಲ್ಪವು ಕ್ರಿ.ಶ. ಸುಮಾರು ೧೧ನೇ ಶತಮಾನದ್ದಾಗಿದೆ. ಈ ಶಿಲ್ಪದಲ್ಲಿ ನಾರಾಯಣ ಪೀಠದ ಮೇಲೆ ಕುಳಿತಿದ್ದಾನೆ. ಲಕ್ಷ್ಮೀಯನ್ನು ತನ್ನ ಎಡತೊಡೆಯ ಮೇಲೆ ಕೂರಿಸಕೊಂಡಿರುವನು. ನಾರಾಯಣನು ನಾಲ್ಕು ಕೈಗಳನ್ನು ಹೊಂದಿದ್ದು, ಕ್ರಮವಾಗಿ ಭಗ್ನ ಲಕ್ಷ್ಮೀಯ ಕೈಯನ್ನು ಹಿಡಿದಿರುವನು. ಲಕ್ಷ್ಮೀಯ ಹೆಗಲ ಮೇಲೆ ಹಾಕಿರುವನು ಸೊಂಟವನ್ನು ಹಿಡಿದಿರುವನು, ನಾರಾಯಣನು ವಿವಿಧ ರೀತಿಯ ವಸ್ತ್ರಗಳನ್ನು ಧರಿಸಿದ್ದಾನೆ. ಕಾಲುಕಡಗ, ಸೊಂಟಪಟ್ಟಿ, ಕಟಿ ವಸ್ತ್ರಧಾರಿಯಾಗಿರುವನು. ಕೊರಳಹಾರ, ತೊಳಬಂದಿ, ಕೈಕಡಗ, ಕಿವಿಯೊಲೆ ತಲೆಗೆ ಕಿರೀಟ ಧರಿಸಿರುವನು. ಲಕ್ಷ್ಮೀಯು ನಾರಾಯಣನ ಎಡ ತೊಡೆಯ ಮೇಲೆ ತನ್ನ ಬಲಗಾಲನ್ನು ಎಡಗಾಲಿನ ಮೇಲೆ ಹಾಕಿಕೊಂಡು ಕುಳಿತಿರುವಳು. ಅವಳು ಎರಡು ಕೈಗಳನ್ನು ಹೊಂದಿದ್ದು, ಬಲಗೈಯನ್ನು ನಾರಾಯಣನ ಭುಜದ ಮೇಲೆ ಎಡಗೈಯನ್ನು ಸೊಂಟದ ಹತ್ತಿರ ಇಟ್ಟುಕೊಂಡಿರುವಳು. ಲಕ್ಷ್ಮೀಯು ಮಾಳಕಾಲವರೆಗೆ ಸೀರೆಯನ್ನು ವಿವಿಧ ರೀತಿಯ ಆಭರಣಗಳನ್ನು ಧರಿಸಿದ್ದಾಳೆ. ಕೈಬಳೆ, ಉಂಗುರ, ತೊಳಬಂದಿ, ಸೊಂಟಪಟ್ಟಿ, ಕೊರಳಹಾರ, ಕಿವಿಯೊಲೆ, ಕಾಲುಉಂಗುರ, ಕಾಲುಚೈನುಗಳನ್ನು ಹೊಂದಿರುವಳು, ಈ ಶಿಲ್ಪವನ್ನು ಕಪ್ಪುಕಲ್ಲಿನಲ್ಲಿ ಕೆತ್ತಲಾಗಿದ್ದು, ನೋಡಲು ತುಂಬಾ ಆಕರ್ಷಕವಾಗಿದೆ. ಶಿಲ್ಪದ ಸುತ್ತಲೂ ಅಲಂಕರಣೆಯಿಂದ ಕೊಡಿದ ಪ್ರಭಾವಳಿ ಇದೆ.

ಈ ಸುಂದರವಾದ ಲಕ್ಷ್ಮೀನಾರಾಯಣನ ಶಿಲ್ಪದಲ್ಲಿ ದುರಾದೃಷ್ಟವಶಾತ್ ಕೈಗಳಲ್ಲಿರುವ ಆಯುಧಗಳನ್ನು ಭಗ್ನಗೊಳಿಸಲಾಗಿದೆ.. ಶಿಲ್ಪದ ಲಕ್ಷಣದ ಆಧಾರದ ಮೇಲೆ ನಾರಾಯಣ ಎಂದು ತೊಡೆಯ ಮೇಲಿನ ದೇವಿಯನ್ನು ಲಕ್ಷ್ಮೀಯೆಂದು ಗುರುತಿಸಬಹುದು.

ಅಸಗೋಡು ಶಂಭುಲಿಂಗೇಶ್ವರ ದೇವಾಲಯದ ದಕ್ಷಿಣ ಗೋಡೆಯಲ್ಲಿರುವ ಶೂಲ ಬ್ರಹ್ಮ ಅಥವಾ ಗುಂಡ ಬ್ರಹ್ಮಯ್ಯ ಶಿಲ್ಪವು ಕ್ರಿ.ಶ. ೧೩ನೇ ಶತಮಾನದ್ದಾಗಿದೆ. ಇದೊಂದು ಉಬ್ಬುಶಿಲ್ಪ ಇದರಲ್ಲಿ ಗುಂಡಯ್ಯ ಬ್ರಹ್ಮಯ್ಯರು ಅವರ ಸತಿಯರೊಂದಿಗೆ (?) ಎದುರು ಬದುರಾಗಿ ಪ್ರತಿಬಿಂಬಾನು ಕ್ರಮದಲ್ಲಿ ನಿಂತಿದ್ದಾರೆ. ಇಬ್ಬರ ನಡುವೆ ಎರಡೂ ಶೂಲಗಳಿವೆ. ಹೀಗಾಗಿ ಈ ಶಿಲ್ಪ ನೀತಿಗೆರೆಯ ಶಿಲ್ಪವನ್ನು ಹೋಲುತ್ತದೆ. ಸಿಂಹ ಲಲಾಟವಿದೆ. ಗುಂಡಯ್ಯ ಬ್ರಹ್ಮಯ್ಯರಿಬ್ಬರು ತಮ್ಮ ತಮ್ಮ ಎಡಗೈಯಲ್ಲಿ

ಇಷ್ಟಲಿಂಗಗಳನ್ನು ಇಟ್ಟುಕೊಂಡು ಬಲಗೈಯಿಂದ ಸ್ವಲ್ಪ ಮುಚ್ಚಿರುವಂತೆ ಚಿತ್ರಣವಿದ್ದರೆ. ಇಲ್ಲಿ ಪ್ರತಿಬಿಂಬಾನು ಕ್ರಮದಲ್ಲಿ ಬಲಗಡೆಯವನು ಬಲಗೈಯಲ್ಲಿ, ಎಡಗಡೆಯವನು ಎಡಗೈಯಲ್ಲಿ ಇಷ್ಟಲಿಂಗಗಳನ್ನು ಹಿಡಿದುಕೊಂಡು ಇನ್ನೊಂದೊಂದು ಕೈಯನ್ನು ಶೂಲದತ್ತ ಚಾಚಿಕೊಂಡು ನಿಂತಿದ್ದಾರೆ. ಬಲ ಮತ್ತು ಎಡ ಬದಿ ನಿಂತಿರುವ ಸತಿಯರು ನೀತಿಗೆರೆಯ ಶಿಲ್ಪದಲ್ಲಿ ಹೇಗೊ ಹಾಗೆ ಇಲ್ಲೂ ಮಂಗಳ ದ್ರವ್ಯಗಳನ್ನ ತಟ್ಟೆಗಳಲ್ಲಿ ಹಿಡದುಕೊಂಡಿದ್ದಾರೆ. ಇನ್ನೂ ಒಂದು ವಿಶೇಷವೆಂದರೆ ಇಲ್ಲಿ ಇಬ್ಬರು ಹೆಂಗಸರು ಸತೀತ್ವ ಸೂಚಕವೇನೂ ಎನ್ನುವಂಥ ಮಾಲೆಗಳನ್ನು ಧರಿಸಿದ್ದಾರೆ. ನೆಲದಿಂದ ಶೂಲದತ್ತ ಜಿಗಿಯುವಂತೆ ಚಿತ್ರಿತವಾಗಿರುವ ಗುಂಡಯ್ಯ ಬ್ರಹ್ಮಯ್ಯರ ಭಂಗಿ ಮರಣದ ಬಗೆಗಿನ ಅವರ ನಿರ್ಭಿತಿಯನ್ನು ಆತ್ಮಾರ್ಪಣೆಯ ಉತ್ಸಾಹವನ್ನು ಪ್ರಕಟಿಸುವಂತಿದೆ.

ಕಲ್ಲೇದೇವರಪುರ ಗ್ರಾಮದ ತ್ರಿಕೋಟೆಲಿಂಗೇಶ್ವರದ ಮುಖಮಂಟಪದ ಮೇಲಿನ ಗೂಡಿನಲ್ಲಿರುವ ಕಾರ್ತಿಕೇಯ ಶಿಲ್ಪವು ಕಪ್ಪುಶಿಲೆಯಲ್ಲಿ ಇದೆ. ಈಚೆಗೆ ನಿರ್ಮಿಸಿದ ಮುಖಮಂಟಪದ ಮೇಲಿನ ಗೂಡಿನಲ್ಲಿ ಇಡಲಾಗಿದೆ. ನವಿಲ ಮೇಲೆ ಅಸೀನವಾಗಿರುವ ಈ ಮೂರ್ತಿ ದ್ವಿಭುಜಧಾರಿಯಾಗಿದೆ. ಪದ್ಮಾಸನದಲ್ಲಿ ಕುಳಿತು ಧ್ಯಾನಸಕ್ತವಾಗಿರುವ ಈ ಮೂರ್ತಿಯು ಕರುಡ ಮುಕುಟಧಾರಿಯಾಗಿದೆ. ಕಿವಿಯಲ್ಲಿ ಕುಂಡಲ, ಕೊರಳಲ್ಲಿ ಕಂಠೀಹಾರ, ಹಾಗೂ ಯಜ್ಞೋಪವೀತಗಳಿವೆ. ಪಾಣಿಪೀಠದ ಬಿಂಬದಲ್ಲಿ ಗರುಡನ ಶಿಲ್ಪವಿದೆ. ಇದರಿಂದಾಗಿ ಪಾಣಿಪೀಠವು ಮೂಲತಃ ಬೇರೆ ಮೂರ್ತಿಯೆಂದು ತಿಳಿಯಬಹುದು. ಇದೇ ಲಕ್ಷಣವುಳ್ಳ ಮೂರ್ತಿಗಳ ನಂದಿತಾವರೆ ಮತ್ತು ವಾಸನಗಳಲ್ಲಿ ಕಂಡುಬರುತ್ತವೆ. ಮೂರ್ತಿ ಲಕ್ಷಣದ ಆಧಾರದ ಮೇಲೆ ಇದು ಕಲ್ಯಾಣಿ ಚಾಲುಕ್ಯರ ಕಾಲದ್ದೆಂದು ಹೇಳಬಹುದು.

ಚದುರುಗೋಳದ ಕಲ್ಲೇಶ್ವರ ದೇವಾಲಯದ ಸಮೀಪದಲ್ಲಿರುವ ಅನಂತಶಯನ ವಿಷ್ಣು ಕ್ರಿ.ಶ. ೧೧ ನೇ ಶತಮಾನದ್ದಾಗಿದೆ. ಕಪ್ಪು ಶಿಲೆಯಲ್ಲಿರುವ ಶಿಲ್ಪವು ಪೀಠದ ಮೇಲೆ ಇದೆ. ಏಳು ಹೆಡೆ ಸರ್ಪ ಅದರ ಮೇಲು ಭಾಗದಲ್ಲಿದೆ. ವಿಷ್ಣುವು ಎರಡೂ ಕಾಲನ್ನು ಚಾಚಿ ಶಯನನಾಗಿದ್ದಾನೆ. ಕಿರೀಟ ಮುಖಿಯಾದ ಈತನ ತಲೆಯನ್ನು ಬಲಗೈ ಒತ್ತಿ ಹಿಡಿದಿದೆ. ಉಳಿದ ಕೈಗಳಲ್ಲಿ ಹಿಡಿದ ಆಯುಧಗಳು ಗೋಚರಿಸುವುದಿಲ್ಲ. ಭುಜಕೀರ್ತಿ, ಕೇಯೂರಗಳಿವೆ. ಕಿವಿಯಲ್ಲಿ ಪತ್ರಕುಂಡಲ, ಕೊರಳಲ್ಲಿ ಕಂಠೀಹಾರ, ಉದರಬಂಧ, ಯಜ್ಞೋಪವೀತ, ಕಾಲಿನವರೆಗೆ ಇಳಿಬಿದ್ದ ವೈಜಯಂತಿ ಹಾರವಿದೆ. ನಾಭಿಯಿಂದ ಹೊರಬಂದ ಪದ್ಮದ ಮೇಲಿದ್ದ ಬ್ರಹ್ಮ ಶಿಲ್ಪ ಇಲ್ಲಿ ಕಾಣುತ್ತಿಲ್ಲ. ಮೊಳಕಾಲವರೆಗೆ ಇಳಿಬಿದ್ದ ಪಂಚೆಯನ್ನು ಆಭರಣಗಳಿಂದ ಅಲಂಕರಿಸಲಾಗಿದೆ. ಕಾಲ್ಗಡಗ, ಪಾದಸರಗಳಿಂದ ಅಲಂಕೃತವಾದ ಕಾಲಿನ ಬಳಿ ಕೇವಲ ಶ್ರೀದೇವಿಯೊಬ್ಬಳು ಕಾಣುತ್ತಿದ್ದು, ಭೂದೇವಿಯು ತೃಟಿತವಾಗಿರಬೇಕೆನಿಸುತ್ತದೆ. ಈ ಮೂರ್ತಿಯ ಲಕ್ಷಣಗಳ ಆಧಾರದ ಮೇಲೆ ಕಲ್ಯಾಣಿ ಚಾಲುಕ್ಯರ ಕಾಲದ್ದೆಂದು ಹೇಳಬಹುದು.

ಬಿಳಿಚೋಡು ವೇಣುಗೋಪಾಲಸ್ವಾಮಿ ದೇವಾಲಯದ ಗರ್ಭಗುಡಿಯಲ್ಲಿರುವ ವೇಣುಗೋಪಾಲ ಶಿಲ್ಪವು ಕ್ರಿ.ಶ. ೧೧ ನೇ ಶತಮಾನದ್ದಾಗಿದೆ. ಬಳಪದ ಕಲ್ಲಿನಲ್ಲಿರುವ ಇದು ಪೀಠದ ಮೇಲೆ ಸ್ಥಾನಿಕವಾಗಿ

ಚತುರ್ಭುಜಧಾರಿಯಾಗಿದ್ದು, ಕಿರೀಟ ಮುಕುಟಧಾರಿಯಾಗಿದೆ. ಕಿವಿಯಲ್ಲಿ ಪತ್ರ ಕುಂಡಲಗಳಿದ್ದು ಕೈಗಳಲ್ಲಿ ಕ್ರಮವಾಗಿ ಶಂಖ, ಚಕ್ರ, ಕೊಳಲು, ಗಧೆಗಳನ್ನು ಹಿಡಿದಿರುವನು. ಕೈಗಳಿಗೆ ಕಡಗ, ಕೇಯೂರಗಳು, ಕೊರಳಲ್ಲಿ ವಿವಿಧ ಬಗೆಯ ಹಾರಗಳಿವೆ. ಯಜ್ಞೋಪವಿತ ಹಾಗೂ ವೈಜಯಂತಿ ಹಾರ, ನಡುವಿನಲ್ಲಿ ನಡುಬಂಧವಿದೆ. ಮಣಿಸರಗಳಿಂದ ಅಲಂಕರಿಸಲಾದ ದೂತಿ ಇದೆ. ಕಾಲಿನಲ್ಲಿ ಕಡಗ ಪಾದ ಸರಗಿದ್ದು, ಕಾಲ ಬಳಿ ಗೋವುಗಳು ಕೊಳಲ ನಾದವನ್ನು ಆಲಿಸುವ ರೀತಿ ಶಿಲ್ಪಿ ಕೆತ್ತಿದ್ದಾನೆ. ಅಂಜಲಿ ಬದ್ಧನಾಗಿರುವ ಗರುಡನ ಶಿಲ್ಪ ಇದೆ. ಈ ಮೂರ್ತಿಯ ಶೈಲಿಯನ್ನು ಆಧರಿಸಿ ಇದು ಕಲ್ಯಾಣಿ ಚಾಲುಕ್ಯರ ಕಾಲದ್ದೆಂದು ಹೇಳಬಹುದು.

ಬೊಡದ ಗುಡ್ಡದ ಕೆರೆ ಏರಿಯ ಹಿಂದಿನ ದೇವಾಲಯದಲ್ಲಿರುವ ವಿಷ್ಣು ಜನಾರ್ಧನ ಶಿಲ್ಪವು ಕ್ರಿ.ಶ. ೧೨ ನೇ ಶತಮಾನದ್ದಾಗಿದೆ. ಶಿಲ್ಪದ ಕೆಳಗಿನ ಭಾಗ ಮಣ್ಣಲ್ಲಿ ಹೂತುಹೋಗಿದೆ. ವಿಷ್ಣು ತನ್ನ ಕೈಗಳೆಲ್ಲ ಕ್ರಮವಾಗಿ ಭಗ್ನ ಚಕ್ರ, ಶಂಖ, ಗಧೆಗಳನ್ನು ಹಿಡಿದಿರುವನು. ಹಾಗಾಗಿ ಜನಾರ್ಧನ ಶಿಲ್ಪ, ಸರಳ ಪ್ರಭಾವಳಿಯನ್ನು ಹೊಂದಿದೆ. ತಲೆಗೆ ಕಿರೀಟ, ಕೈಕಡಗ, ತೋಳಬಂದಿ, ಕಂಠಹಾರ, ವಿವಿಧ ರೀತಿಯ ಆಭರಣಗಳನ್ನು ಧರಿಸಿದ್ದಾನೆ. ಈ ಶಿಲ್ಪದ ಎದುರಿಗೆ ಕ್ರಿ.ಶ.೧೨ನೇ ಶತಮಾನದ ದೇವಾಲಯವಿದೆ. ಈ ಶಿಲ್ಪವೂ ಸಹ ಆ ಕಾಲಕ್ಕೆ ಸೇರಿರಬಹುದು.

### ಶಾಕ್ತ ಶಿಲ್ಪಗಳು

ಭಾರತ ವೈವಿಧ್ಯಮಯ ಸಂಸ್ಕೃತಿಯನ್ನು ಹೊಂದಿದ ದೇಶಯ ಇಲ್ಲಿ ಸ್ತ್ರೀಗೆ ವಿಶೇಷ ಸ್ಥಾನವಿದೆ. ಇತಿಹಾಸ ಆರಂಭ ಕಾಲದಿಂದಲೂ ಮಾತೃದೇವತೆಯ ಆರಾಧನೆಯ ಸಮಾಜವನ್ನು ನೋಡುತ್ತೇವೆ ಕ್ರಿ.ಪೂ.೩೦೦೦ ರಿಂದ ಇಂದಿಗೂ ಸಹ ಮಾತೃ ದೇವತಾ ಆರಾಧನೆ ಪ್ರಚಲಿತದಲ್ಲಿದೆ. ಹಾಗಾಗಿ ಶಿಲ್ಪ ಕಲೆಯ ಇತಿಹಾಸದಲ್ಲಿ ಶಕ್ತಿದೇವತೆಯ ಶಿಲ್ಪಗಳನ್ನು ಕಾಣುತ್ತೇವೆ. ಅವುಗಳನ್ನು ಶಾಕ್ತ ಶಿಲ್ಪಗಳೆನ್ನುವರು .ಪ್ರಸ್ತುತ ಅಧ್ಯಯನ ಪ್ರದೇಶದಲ್ಲಿ ಕಂಡು ಬರುವ ಪ್ರಮುಖ ಶಾಕ್ತ ಶಿಲ್ಪಗಳನ್ನು ಈ ಕೆಳಗಿನಂತೆ ಅಧ್ಯಯನ ಮಾಡಲಾಗಿದೆ.

ಬಿಳಿಚೋಡು ಗ್ರಾಮದ ಮಧ್ಯ ಕಟ್ಟೆಯ ಮೇಲಿರುವ ಕಾಳಿ ಮತ್ತು ಶಿವ ಶಿಲ್ಪಗಳು ಕ್ರಿ.ಶ. ೧೫-೧೬ ನೇ ಶತಮಾನದವುಗಳಾಗಿದ್ದು ಇವು ಹೊಸದಾಗಿ ದೇವಸ್ಥಾನದ ಬುನಾದಿ ತೋಡುವಾಗ ದೊರೆತಿದೆ. ಕಾಳಿ ಶಿಲ್ಪವು ತುಂಬಾ ಭಗ್ನಗೊಂಡಿರುವುದರಿಂದ ವಿವರ ಅಸ್ಪಷ್ಟವಾಗಿದೆ. ಪೀಠದ ಮೇಲಿರುವ ಶಿಲ್ಪವು ಮರಳುಗಲ್ಲಿನದ್ದು. ಶಿಲ್ಪವು ಹೂವಿನಹಾರ ಕಿವಿಯೋಲೆ, ಕಂಠಹಾರ ಮುಂತಾದ ಆಭರಣಗಳನ್ನು ಧರಿಸಿದೆ. ಕೆಳಗೆ ಸಿಂಹದ ಚಿತ್ರವಿದೆ. ಕೈಗಳನ್ನು ಜೋಡಣೆ ಮಾಡಲು ಕಬ್ಬಿಣದ ಸಲಾಕೆಯನ್ನು ಬಳಸಿದ್ದಾರೆ. ಅದರ ಪಕ್ಕದಲ್ಲೇ ಇನ್ನೊಂದು ಅರ್ಧಶಿಲ್ಪವಿದೆ. ಅದರ ಕೈಯಲ್ಲಿ ತ್ರಿಶೂಲವಿದೆ. ಆದ್ದರಿಂದ ಇದನ್ನು ಶಿವ ಎಂದು ಹೇಳಬಹುದು. ಶಿಲ್ಪದ ಹಿಂದೆ ಅಲಂಕಾರವುಳ್ಳ ಪ್ರಭಾವಳಿಯನ್ನು ಕಾಣುತ್ತೇವೆ. ಶಿಲ್ಪದ ಲಕ್ಷಣಗಳ ಆಧಾರದ ಮೇಲೆ ಇದನ್ನು ವಿಜಯನಗರ ಕಾಲದ್ದೆಂದು ಹೇಳಬಹುದು.

ಕೊಡದ ಗುಡ್ಡದರು ಕೆರೆ ಏರಿಯ ಹಿಂದಿನ ದೇವಾಲಯದಲ್ಲಿರುವ ಮಹಿಷ ಮರ್ದಿನಿ ಶಿಲ್ಪವು ಕ್ರಿ.ಶ. ೧೩ ನೇ ಶತಮಾನದ್ದಾಗಿದೆ. ಶಿಲ್ಪವು ಕಪ್ಪು ಕಲ್ಲಿನಲ್ಲಿ ಪೀಠದ ಮೇಲೆ ಇದೆ. ನಾಲ್ಕು ಕೈಗಳನ್ನು ಹೊಂದಿದ್ದು ಕೈಗಳಲ್ಲಿ ಕ್ರಮವಾಗಿ ತ್ರಿಶೂಲ, ಚಕ್ರ, ಶಂಖ, ಹಿಡಿದಿರುವಳು. ಒಂದು ಕಾಲನ್ನು ಕೆಳಗೆ, ಇನ್ನೊಂದು ಕಾಲನ್ನು ಮಹಿಷನ ಮೇಲೆ ತ್ರಿಶೂಲದಿಂದ ತಿವಿದಿದ್ದಾಳೆ. ಕಾಲ ಕೆಳಗೆ ಕೋಣ ಇದೆ. ಕೊರಳಿಗೆ ಕಂಠಹಾರ, ಕಿವಿಯೋಲೆ, ಮೊಳಕಾಲವರೆಗೆ ನೆರಿಗೆಯುಳ್ಳ ಸೀರೆ, ಕೈಬಳೆ, ತೋಳಬಂದಿ, ಕಾಲಕಡಗ ಸೊಂಟ ಪಟ್ಟಿಯನ್ನು ಧರಿಸಿರುವಳು. ಶಿಲ್ಪದ ಸುತ್ತಲೂ ಪ್ರಭಾವಳಿ ಇದೆ. ಕೋಣನ ಬೆನ್ನ ಮೇಲೆ ಒಂದು ರೀತಿಯ ವಸ್ತ್ರಹಾಕಲಾಗಿದೆ.

ಅಣಬೂರು ಆಂಜನೇಯ ದೇವಸ್ಥಾನದ ಹಿಂದಿರುವ ಗಜಲಕ್ಷ್ಮಿ ಶಿಲ್ಪವು ಕ್ರಿ.ಶ. ೧೬-೧೭ ನೇ ಶತಮಾನ ಈ ಶಿಲ್ಪವು ತುಂಬಾ ಭಗ್ನಗೊಂಡಿದೆ. ಸಾಮಾನ್ಯವಾಗಿ ದೇವಸ್ಥಾನದ ಬಾಗಿಲುವಾಡದಲ್ಲಿ ಈ ರೀತಿಯ ಶಿಲ್ಪವನ್ನು ನೋಡುತ್ತೇವೆ. ಈ ಶಿಲ್ಪದಲ್ಲಿ ಎರಡು ಆನೆಗಳು ಲಕ್ಷ್ಮೀದೇವಿಗೆ ಹೂವಿನ ಹಾರವನ್ನು ಹಾಕುತ್ತಿವೆ. ಲಕ್ಷ್ಮೀಯು ಪೀಠದ ಮೇಲೆ ವಿವಿಧ ವಸ್ತ್ರಾಭರಣಗಳಿಂದ ಅಲಂಕೃತವಾಗಿ ಕುಳಿತಿರುವಳು. ಅಣಬೂರಿನ ಹಳೆ ಊರಿನ ಯಾವುದೋ ದೇವಸ್ಥಾನ ಹಾಳಾಗಿರುವುದರಿಂದ ಈ ಶಿಲ್ಪವನ್ನು ಅಲ್ಲಿಂದ ತಂದಿದ್ದಾರೆ.

ಕೊಡದ ಗುಡ್ಡದ ಕೆರೆ ಏರಿಯ ಹಿಂದಿನ ದೇವಾಲಯದಲ್ಲಿರುವ ಸಪ್ತಮಾತೃಕೆಯರ ಶಿಲ್ಪವು ಕ್ರಿ.ಶ. ೧೩ ನೇ ಶತಮಾನದ್ದಾಗಿದೆ. ಈ ಶಿಲ್ಪವು ಕಪ್ಪು ಶಿಲೆಯಲ್ಲಿದೆ. ಇದರಲ್ಲಿ ಬ್ರಾಹ್ಮಿಯ ವಾಹನ ಹಂಸ,[೩] ವೈಷ್ಣವಿ, ಮಹೇಶ್ವರಿ ಇವಳ ವಾಹನ ನಂದಿ,[೪] ಕೌಮಾರಿ ಇವಳ ವಾಹನ ನವಿಲು,[೫] ಇಂದ್ರಾಣಿ ಇವಳ ವಾಹನ ಆನೆ[೬] ವರಾಹಿ ಇವಳ ವಾಹನ ಗರುಡ,[೭] ಚಾಮುಣ್ಡ ಇವಳ ವಾಹನ ಗಿಡುಗ[೮] ಗಳನ್ನು ಹೊಂದಿರುತ್ತಾರೆ. ಈ ದೇವತೆಯರು ತಮ್ಮ ಆಯುಧಗಳನ್ನು ಹಿಡಿದು ವಿವಿಧ ರೀತಿಯ ಆಭರಣಗಳಿಂದ ಅಲಂಕೃತವಾಗಿದ್ದಾರೆ. ಈ ಶಿಲ್ಪದ ಲಕ್ಷಣಗಳನ್ನು ಆಧರಿಸಿ ಕ್ರಿ.ಶ.೧೨ನೇ ಶತಮಾನದ್ದೆಂದು ಹೇಳಬಹುದು.

### ವೀರಗಲ್ಲುಗಳು

ವೀರಗಲ್ಲು ವೀರನು ಯಾವುದೋ ಒಂದು ಹೋರಾಟದಲ್ಲಿ ಹೋರಾಡಿ ಮಡಿದ ನೆನಪಿಗಾಗಿ ನೆಟ್ಟಂತಹ ಒಂದು ಕಲ್ಲು. ವೀರಗಲ್ಲುಗಳಲ್ಲಿ ವೀರನು ಹೋರಾಟದಲ್ಲಿ ಮಡಿದ ಎಂಬ ವಿಷಯವನ್ನು ನೇರವಾಗಿ ಸ್ಪಷ್ಟವಾಗಿ ತಿಳಿಸದೆ ವೀರ ಸ್ವರ್ಗಕ್ಕೆ ಹೋದ ಎಂಬುದಾಗಿ ಹೇಳುವ ಒಂದು ಪದ್ಧತಿ ವೀರಗಲ್ಲುಗಳ ಪಾಠ ಕ್ರಮದಲ್ಲಿ ಬೆಳೆದಿದೆ. ಆರಂಭದ ವೀರಗಲ್ಲುಗಳಲ್ಲಿ ಈ ಬಗ್ಗೆ ಸಾಮಾನ್ಯವಾಗಿ ದೊರೆಯುವ ವರ್ಣನೆ ಎಂದರೆ ಸತ್ತು ಸಗ್ಗಿಯಾದು,[೯] ಕಾದಿ ಸತ್ತು ಸ್ವರ್ಗದಲ್ಲಿರ್ದ[೧೦] ಎಂಬ ವಿವರಗಳು ದೊರೆಯುತ್ತವೆ. ಸತ್ತ ವೀರನನ್ನ ಅಪ್ಸರೆಯರು ವೈಭವದಿಂದ ಸ್ವರ್ಗಕ್ಕೆ ಹೇಗೆ ಒಯ್ಯುವರು ಎಂಬ ವಿವರ ಕ್ರಿ.ಶ. ೧೦೧೮ರ ವೀರಗಲ್ಲಿನ ವರ್ಣನೆ ಈ ರೀತಿ ಇದೆ: ವಿಮಾನದೊಳಿದ್ದು ಸುರಾಂಗನೆತರೆಮಗೆ ತಮಗನುತುಯ್ಸುರು.[೧೧]

ಕಣಕುಪ್ಪೆ ಪರಿಸರದಲ್ಲಿ ನಾವು ಸಾಕಷ್ಟು ಪ್ರಮಾಣದಲ್ಲಿ ಈ ರೀತಿಯ ವೀರಗಲ್ಲುಗಳನ್ನು ಕಾಣುತ್ತೇವೆ. ಅವುಗಳಲ್ಲಿ ಪ್ರಮುಖವಾದವುಗಳನ್ನು ಈ ಕೆಳಗಿನಂತೆ ಅಧ್ಯಯನ ಮಾಡಲಾಗಿದೆ.

ಅಸಗೋಡು ಕೆರೆ ಏರಿಯ ತೂಬಿನ ಬಳಿ ಇರುವ ಶಾಸನೋಕ್ತ ವೀರಗಲ್ಲು ಕ್ರಿ.ಶ. ೧೦೧೦ ನೇ ಶತಮಾನದ್ದಾಗಿದೆ. ಈ ವೀರಗಲ್ಲು ಮೂರು ಪಟ್ಟಿಕೆಗಳಲ್ಲಿ ಇದೆ. ಮೊದಲ ಪಟ್ಟಿಕೆಯಲ್ಲಿ ವೀರ ಎಡಗೈಯಲ್ಲಿ ಬಿಲ್ಲನ್ನು ಹಿಡಿದಿದ್ದಾನೆ. ತಲೆಗೆ ತುರುಬುಕಟ್ಟಿ, ಕಟಿವಸ್ತ್ರಧಾರಿಯಾಗಿರುವನು, ಅವನ ಎದುರುಗಡೆ ಮೂರು ಜನ ವೈರಿ ಪಡೆಯವರಿದ್ದಾರೆ. ಬಲ ವೈರಿ ಕೆಳಗಡೆ ಬಿದ್ದಿರುವ ದೃಶ್ಯವಿದೆ. ಉಳಿದ ವೈರಿ ಪಡೆಯವರೂ ಸಹ ಬಿಲ್ಲನ್ನು ಹಿಡಿದಿರುವರು.

ಎರಡನೆಯ ಪಟ್ಟಿಕೆಯಲ್ಲಿ ಚಾಮರಧಾರೆ ಅಪ್ಸರೆಯರು ಪುಷ್ಪಕ ವಿಮಾನದಲ್ಲಿ ಸ್ವರ್ಗಕ್ಕೆ ಕೊಂಡೊಯ್ಯುವ ದೃಶ್ಯವಿದೆ. ವೀರ ಪದ್ಮಾಸನದಲ್ಲಿ ಕುಳಿತಿರುವನು. ಮೂರನೆಯ ದೃಶ್ಯದಲ್ಲಿ ವೀರ ಸ್ವರ್ಗವಾಸಿಯಾಗಿ ಪುಷ್ಪಕ ವಿಮಾನದಲ್ಲಿ ಕುಳಿತಿದ್ದಾನೆ. ಎದುರು ಬದಿಯಲ್ಲಿ ಪೂರ್ಣಕಳಸದ ಚಿತ್ರವಿದೆ. ವೀರಗಲ್ಲಿನ ಮಧ್ಯ ಪಟ್ಟಿಕೆಗಳಲ್ಲಿ ಶಾಸನವಿದೆ.

ಶಾಸನದ ವಿವರ ದಶವರ್ಮನ ಮಗ ಬಿಣಯಿತ ಎಂಬುವವನು ಆಳುತ್ತಿದ್ದಾಗ, ಅಸಗಗೋಡಿನ ಗಾಮುಣ್ಡ ಅಸಗಕಾಡಚ ಎಂಬುವವನ ಮಗ ಕಾಡವಾಸನು ಬಲತ್ಕಾರದಿಂದ ಕೊಂಡೊಯ್ಯುತ್ತಿದ್ದ ಕಿತ್ತೂರಿನ ಗೋವುಗಳನ್ನು ಬಿಡಿಸಿಕೊಂಡು ಬರಲು ಹೋಗಿ ಹೋರಾಡಿ ಸತ್ತನೆಂಬ ಸಂಗತಿ ಈ ಶಾಸನದಿಂದ ತಿಳಿಯುತ್ತದೆ.

ಅಸಗೋಡು ಕಡ್ಲೆ ಬಸಪ್ಪ ದೇವಾಲಯದ ಮುಂದಿರುವ ವೀರಗಲ್ಲು ಕ್ರಿ.ಶ. ೧೧ನೇ ಶತಮಾನದಾಗಿದೆ. ಈ ಶಿಲ್ಪವು ಮೂರು ಪಟ್ಟಿಕೆಗಳನ್ನು ಒಳಗೊಂಡಿದೆ. ಮೊದಲ ಪಟ್ಟಿಕೆಯಲ್ಲಿ ಮೂರು ಜನ ವೀರರು ಬಿಲ್ಲುಗಳನ್ನು ಹಿಡಿದು ಹೋಗುತ್ತಿರುವಂತಿದೆ. ಎದುರುಗಡೆ ವೈರಿ ಪಡೆಯುವರು ಆಯುಧಗಳನ್ನು ಹಿಡಿದು ಕಟಿವಸ್ತ್ರಧಾರಿಯಾಗಿರುವರು. ಎರಡನೇ ದೃಶ್ಯದಲ್ಲಿ ನಾಲ್ಕು ಜನ ಅಪ್ಸರೆಯರು ಮೂರು ಜನ ವೀರರನ್ನು ಸ್ವರ್ಗಕ್ಕೆ ಕರೆದೊಯ್ಯುತ್ತಿರುವ ಚಿತ್ರವಿದೆ. ಅಪ್ಸರೆಯರು ವೀರರ ಹೆಗಲ ಮೇಲೆ ಕೈಗಳನ್ನು ಹಾಕಿರುವರು. ಕೊನೆಯ ಅಪ್ಸರೆಯರು ಚೌರಿಗಳನ್ನು ಹಿಡಿದಿರುವರು. ಮೂರನೆಯ ದೃಶ್ಯದಲ್ಲಿ ಮೂರು ಜನ ವೀರರು ಶಿವಲಿಂಗಕ್ಕೆ ಕೈಮುಗಿದು ಕುಳಿತಿರುವರು. ಯತಿಯು ಶಿವಲಿಂಗಕ್ಕೆ ಮಂಗಳಾರತಿ ಮಾಡುವ ದೃಶ್ಯವಿದೆ. ಈ ಶಿಲ್ಪವನ್ನು ಯಾವುದೇ ಯುದ್ಧದಲ್ಲಿ ಮೂರು ಜನ ವೀರರು ಹೋರಾಡಿ ಸತ್ತ ಬಗ್ಗೆ ತಿಳಿಸುತ್ತದೆ. ಅದರ ನೆನಪಿಗಾಗಿ ಈ ಶಿಲ್ಪವನ್ನು ಹಾಕಿಸಲಾಗಿದೆ.

ಅಸಗೋಡು ಕಡ್ಲೆ ಬಸಪ್ಪ ದೇವಾಲಯದ ಮುಂದಿರುವ ವೀರಗಲ್ಲು ಕ್ರಿ.ಶ. ೧೨ ನೇ ಶತಮಾನದ್ದಾಗಿದೆ. ಈ ವೀರಗಲ್ಲು ಮೂರು ದೃಶ್ಯಗಳಲ್ಲಿದ್ದು ಮೊದಲ ದೃಶ್ಯದಲ್ಲಿ ವೀರನು ಎಡಗೈಯಲ್ಲಿ ಗುರಾಣಿ, ಬಲಗೈಯಲ್ಲಿ ಕತ್ತಿ ಹಿಡಿದಿರುವನು. ವೀರನ ತಲೆಯ ಹಿಂದೆ ತುರುಬು ಇದೆ. ಕೊರಳಲ್ಲಿ ಹಾರ, ಸೊಂಟದಲ್ಲಿ ಚಾಕು, ಕಟೀವಸ್ತ್ರಧಾರಿಯಾಗಿರುವನು. ವೈರಿಪಡೆಯವನು ಕುದುರೆಯ

ಕಾಲಕೆಳಗೆ ಬಿದ್ದಿದ್ದಾನೆ. ಒಬ್ಬ ಎದುರಾಳಿ ಕುದುರೆಯ ಮೇಲೆ ಏರಿ ಎಡಗೈಯಲ್ಲಿ ಕುದುರೆಯ ಲಗಾಮು, ಬಲಗೈಯಲ್ಲಿ ಈಟಿ ಹಿಡಿದು ಬರುತ್ತಿದ್ದಾನೆ. ಉಳಿದ ಮೂರು ಜನ ವೈರಿ ಪಡೆಯವರು ಬಲಗೈಯಲ್ಲಿ ಖಡ್ಗ ಹಿಡಿದು ಮೇಲಕ್ಕೆತ್ತಿ ಎಡಗೈಗಳಲ್ಲಿ ಗುರಾಣಿ ಹಿಡಿದಿದ್ದಾರೆ.

ಎರಡನೆಯ ದೃಶ್ಯದಲ್ಲಿ ವೀರನನ್ನು ಅಪ್ಸರೆಯರು ವಿಮಾನದಲ್ಲಿ ಸ್ವರ್ಗಕ್ಕೆ ಕರೆದೊಯ್ಯುತ್ತಿರುವರು. ವಿಮಾನವು ದ್ರಾವಿಡ ಶೈಲಿಯ ಶಿಖರದಂತಿದೆ. ವಿಮಾನದಲ್ಲಿ ವೀರ ಕೈ ಮುಗಿದು ಕುಳಿತಿದ್ದಾನೆ. ಅಪ್ಸರೆಯರು ಚೌರಿಗಳನ್ನು ಹಿಡಿದು ನೆರಿಗೆಯುಳ್ಳ ಸೀರೆಯನ್ನು ಧರಿಸಿರುವರು. ವಿವಿಧ ರೀತಿಯ ಆಭರಣಗಳನ್ನು ಧರಿಸಿ ತಲೆಯ ಮೇಲೆ ಕಿರೀಟ ಹೊಂದಿರುವರು.

ಮೂರನೆಯ ದೃಶ್ಯದಲ್ಲಿ ವೀರನು ಶಿವಲಿಂಗದ ಮುಂದೆ ಕುಳಿತಿದ್ದಾನೆ. ತಲೆಯ ಮೇಲೆ ಕಮಂಡಲ ಇದೆ. ಯತಿಯು ಶಿವಲಿಂಗಕ್ಕೆ ಎಡಗೈಯಲ್ಲಿ ಗಂಟೆ ಬಲಗೈಯಲ್ಲಿ ಆರತಿ ತಟ್ಟೆ ಹಿಡಿದು ಪೂಜೆ ಮಾಡುತ್ತಿರುವವನು. ಶಿವಲಿಂಗದ ರುದ್ರಭಾಗಕ್ಕೆ ರುದ್ರಾಕ್ಷಿ ಸರ ಹಾಕಲಾಗಿದೆ. ಶಿವಲಿಂಗದ ಕೆಳಗೆ ನಂದಿಯು ಕುಳಿತಿದೆ. ನಂದಿಗೆ ಗಂಟೆಸರ, ಕೊರಳಹಾರ ಹಾಕಲಾಗಿದೆ. ಶಿವಲಿಂಗದ ಜಲಾಹರಿಯ ಎದುರಿಗೆ ಅಪ್ಸರೆಯರು ಬಲಗೈಯಲ್ಲಿ ಚೌರಿಗಳನ್ನು ಹಿಡಿದು ಬೀಸುತ್ತಿದ್ದಾರೆ. ಶಿಲ್ಪದ ಮೇಲ್ಭಾಗದಲ್ಲಿ ಕಳಸದ ರೀತಿ ಇದೆ. ಶಿಲ್ಪದಲ್ಲಿ ಸೂಕ್ಷ್ಮ ಕೆತ್ತನೆಗೆ ಅವಕಾಶ ಮಾಡಲಾಗಿವೆ. ಪ್ರಮುಖ ವೀರನೊಬ್ಬ ಮಡಿದುದರ ನೆನಪಿಗಾಗಿ ಈ ಶಿಲ್ಪ ನೆಡಲಾಗಿದೆ.

ಬಿಳಿಚೋಡು ಈಶ್ವರ ದೇವಾಲಯದ ಮುಂದಿರುವ ಈ ವೀರಗಲ್ಲು ಕ್ರಿ.ಶ. ೧೫-೧೬ ನೇ ಶತಮಾನದ್ದಾಗಿದೆ. ಈ ಶಿಲ್ಪವನ್ನು ಮೂರು ಪಟ್ಟಿಕೆಗಳಲ್ಲಿ ಕಾಣುತ್ತೇವೆ. ಮೊದಲ ಪಟ್ಟಿಕೆಯಲ್ಲಿ ವೀರನು ಬಲಗೈಯಲ್ಲಿ ಖಡ್ಗ, ಎಡಗೈಯಲ್ಲಿ ಗುರಾಣಿ ಹಿಡಿದು ಹೋರಾಡುತ್ತಿರುವನು. ವೈರಿ ಪಡೆಯವರೂ ಸಹ ಕೊಡಲಿ, ಕತ್ತಿ, ಗುರಾಣಿಗಳನ್ನು ಹಿಡಿದಿದ್ದಾರೆ. ವೈರಿ ಪಡೆಯ ಒಬ್ಬ ಕೆಳಗೆ ಸತ್ತು ಬಿದ್ದಿದ್ದಾನೆ.

ಎರಡನೇ ದೃಶ್ಯದಲ್ಲಿ ವೀರನನ್ನು ಆರು ಜನ ಅಪ್ಸರೆಯರು ಭುಜದ ಮೇಲೆ ಕೈ ಹಾಕಿಕೊಂಡು ಸ್ವರ್ಗಕ್ಕೆ ಕರೆದುಕೊಂಡು ಹೋಗುತ್ತಿರುವರು. ಕೊನೆಯ ಎರಡು ಜನ ಅಪ್ಸರೆಯರು ಚೌರಿಗಳನ್ನು ಹಿಡಿದಿದ್ದಾರೆ. ಮೂರನೆಯ ದೃಶ್ಯದಲ್ಲಿ ವೀರನು ಬಲಬದಿಯಲ್ಲಿ ಶಿವಲಿಂಗಕ್ಕೆ ಕೈ ಮುಗಿದು ಕುಳಿತಿರುವನು. ಯತಿಯು ಶಿವಲಿಂಗಕ್ಕೆ ಪೂಜೆ ಮಾಡುತ್ತಿದ್ದಾನೆ. ಶಿವಲಿಂಗದ ಮುಂದೆ ಹಸು ಮತ್ತು ಕರುಗಳು ಕುಳಿತಿವೆ. ಯತಿಯು ಉದ್ದನೆಯ ಜಡೆ, ಕಿರೀಟ ಧೂತಿಯಂತಹ ವಸ್ತ್ರಧರಿಸಿರುವನು. ವೀರನು ತಲೆಗೆ ತುರುಬುಕಟ್ಟಿದ್ದಾನೆ. ಕಟಿ ವಸ್ತ್ರಧಾರಿಯಾಗಿ ಎಡ ಮತ್ತು ಬಲ ತೋಳುಗಳಿಗೆ ಕಡಗ ಹಾಕಿರುವನು.

ಈ ಶಿಲ್ಪದ ಲಕ್ಷಣದ ಆಧಾರದ ಮೇಲೆ ಯಾವುದೋ ಒಬ್ಬ ಪ್ರಮುಖ ವೀರಮಡಿದುದರ ನೆನಪಿಗಾಗಿ ಈ ಶಿಲ್ಪವನ್ನು ಹಾಕಿಸಿದ್ದಾರೆ.

ಬಿಳಿಚೋಡು ಈಶ್ವರ ದೇವಾಲಯದ ಮುಂದಿರುವ ಈ ವೀರಗಲ್ಲು ಕ್ರಿ.ಶ. ಸುಮಾರು ೧೫-೧೬ ನೇ ಶತಮಾನದ್ದಾಗಿದೆ. ಈ ವೀರಗಲ್ಲನ್ನು ಎರಡು ಪಟ್ಟಿಕೆಗಳಲ್ಲಿ ನೋಡುತ್ತೇವೆ. ಮೊದಲ

ಪಟ್ಟಿಕೆಯಲ್ಲಿ ವೀರನು ಬಿಲ್ಲನ್ನು ಹಿಡಿದು ಹೋರಾಡುತ್ತಿರುವ ದೃಶ್ಯವಿದೆ. ವೀರನು ತನ್ನ ಕಾಲುಗಳಿಂದ ವೈರಿಪಡೆಯ ಒಬ್ಬರನ್ನು ತುಳಿದಿರುವನು. ವೀರನ ಹಿಂದೆ ಮೂರು ಜನ ಸಹಚರ ಪಡೆಯವರಿದ್ದಾರೆ. ವೀರನ ಎದುರು ವೈರಿ ಕುದುರೆಯ ಮೇಲೆ ಏರಿ ದಾಳಿ ಮಾಡುತ್ತಿರುವನು ಒಬ್ಬ ವೈರಿ ಬಿಲ್ಲನ್ನು ಹಿಡಿದು ವೀರನಿಗೆ ಗುರಿ ಹಿಡಿದಿರುವ ದೃಶ್ಯವಿದೆ. ಮೇಲೆ ಇನ್ನಿಬ್ಬರು ವೈರಿಗಳು ಖಡ್ಗಗಳನ್ನು ಹಿಡಿದು ಬರುತ್ತಿರುವ ದೃಶ್ಯ ಇಲ್ಲಿ ವೀರನನ್ನು ದೊಡ್ಡದಾಗಿ ತೋರಿಸಲಾಗಿದೆ. ವೀರನು ಕಟಿ ವಸ್ತ್ರದಾರಿಯಾಗಿದ್ದಾನೆ. ತಲೆಯ ಹಿಂದೆ ತುರುಬು ಇದೆ. ತೃಟಿತವಾಗಿರುವುದರಿಂದ ಆಭರಣಗಳು ಸರಿಯಾಗಿ ಗೋಚರಿಸುವುದಿಲ್ಲ.

ಎರಡನೆಯ ದೃಶ್ಯದಲ್ಲಿ ಅಪ್ಸರೆಯರು ವೀರನನ್ನು ವಿಮಾನದಲ್ಲಿ ಕೂರಿಸಿಕೊಂಡು ಸ್ವರ್ಗಕ್ಕೆ ಕರೆದುಕೊಂಡು ಹೋಗುತ್ತಿರುವ ದೃಶ್ಯವಿದೆ. ಅಪ್ಸರೆಯರು ಚಾಂಗಳನ್ನು ಹಿಡಿದ್ದಿದ್ದಾರೆ. ಈ ಶಿಲ್ಪದ ಲಕ್ಷಣಗಳನ್ನು ನೋಡಿದರೆ ಇವನೊಬ್ಬ ಪ್ರಮುಖ ವೀರ. ವೀರನಿಗಿಂತ ಬಿಲ್ಲನ್ನು ದೊಡ್ಡದಾಗಿ ತೋರಿಸಲಾಗಿದೆ. ಬಿಲ್ಲಿನ ಕಾಳಗದಲ್ಲಿ ಹೋರಾಡಿ ಮಡಿದ ನೆನಪಿಗಾಗಿ ಈ ಶಿಲ್ಪವನ್ನು ಹಾಕಿಸಲಾಗಿದೆ.

ಕ್ರಿ.ಶ. ೧೫-೧೬ ನೇ ಶತಮಾನದ ಶಿಲ್ಪವು ಕೊಡದ ಗುಡ್ಡದಿಂದ ಬರುವ ದಾರಿಯಲ್ಲಿ ಚಿಕ್ಕ ಗುಡಿಯ ಮುಂದೆ ಇಡಲಾಗಿದೆ. ಈ ಶಿಲ್ಪದಲ್ಲಿ ವೀರನು ಕುದುರೆಯನ್ನು ಏರಿ ಕುಳಿತಿದ್ದಾನೆ. ವೀರನು ಎಡಗೈಯಲ್ಲಿ ಕತ್ತಿ ಹಿಡಿಮು ಮುಂದೆ ಚಾಚಿರುವನು. ಬಲಗೈಯಲ್ಲಿ ಖಡ್ಗಹಿಡಿದು ಮೇಲಕ್ಕೆತ್ತಿ ಕುದುರೆಯ ಲಗಾಮನ್ನು ಕಾಲಿಗೆ ಸಿಕ್ಕಿಸಿ ಕೊಂಡಿರುವನು. ವೀರನು ತೋಳಬಂದಿ, ಕೊರಳಿಗೆ ಪದಕದ ಸರ, ಕಿವಿಯೋಲೆ, ಸೊಂಟದಲ್ಲಿ ಚಾಕು, ಕಾಲುಕಡಗ ಧರಿಸಿ, ಕಟಿ ವಸ್ತ್ರಧಾರಿಯಾಗಿರುವನು. ವೀರನ ತಲೆಯ ಮೇಲೆ ಛತ್ರಿಯನ್ನು ತೋರಿಸಲಾಗಿದೆ. ಕುದುರೆಯು ತನ್ನ ಎಡಗಾಲು ಮೇಲಕ್ಕೆತ್ತಿ ಮುಂದೆ ಹೋಗುತ್ತಿರುವಂತಿದೆ. ವೀರನ ಹಿಂದೆ ಒಬ್ಬ ಸ್ತ್ರೀಯನ್ನು ಚಿಕ್ಕದಾಗಿ ತೋರಿಸಲಾಗಿದೆ. ಬಹುಶಃ ಮಡದಿಯಾಗಿರಬೇಕು. ಇವಳು ಕೈ ಬಳೆ, ನೆರಿಗೆಯುಳ್ಳ ಸೀರೆ, ವಿವಿಧ ರೀತಿಯ ಆಭರಣಗಳನ್ನು ಧರಿಸಿದ್ದಾಳೆ. ಈ ಶಿಲ್ಪದ ನಿರೂಪಣೆಯಿಂದ ಒಬ್ಬ ಪ್ರಮುಖ ವೀರ ಯುದ್ಧದಲ್ಲಿ ಮಡಿದ ನೆನಪಿಗಾಗಿ ಈ ಶಿಲ್ಪವನ್ನು ಹಾಕಿಸಲಾಗಿದೆ.

ಕಣಕುಪ್ಪೆ ಕೋಟೆ ಒಳಗೆ ಇರುವ ವೀರಗಲ್ಲು ಕ್ರಿ.ಶ. ೧೬-೧೭ ನೇ ಶತಮಾನದ್ದಾಗಿದೆ. ಈ ಶಿಲ್ಪದಲ್ಲಿ ನಿಂತಿರುವ ವೀರ ತನ್ನ ಬಲಗೈಯಲ್ಲಿ ಖಡ್ಗ ಹಿಡಿದು ಮೇಲಕ್ಕೆ ಎತ್ತಿದ್ದಾನೆ. ಎಡಗೈಯಲ್ಲಿ ಚಾಕು ಹಿಡಿದು ಕೆಳಗೆ ಇಳಿಬಿಟ್ಟಿದ್ದಾನೆ. ಒಬ್ಬ ವೈರಿ ಕೆಳಗೆ ಬಿದ್ದಿದ್ದಾನೆ. ತಲೆಯಲ್ಲಿ ಗುಂಗುರು ಕೂದಲು ಇದ್ದು. ಕಟೀವಸ್ತ್ರಧಾರಿಯಾಗಿದ್ದಾನೆ. ಕೈಗಳಿಗೆ ತೋಳಬಂದಿ, ಸೊಂಟಕ್ಕೆ ಪಟ್ಟಿ ಹಾಕಿದ್ದಾನೆ. ಕಂಠಾಭರಣ ಕಿವಿಯೋಲೆ ಮುಂತಾದ ವಿವಿಧ ರೀತಿಯ ಆಭರಣಗಳನ್ನು ಧರಿಸಿದ್ದಾನೆ. ಇಲ್ಲಿ ವೀರನನ್ನು ನಾಯಕನಂತೆ ತೋರಿಸಲಾಗಿದೆ.

ಕಣಕುಪ್ಪೆ ಕೋಟೆಯ ಒಳಗೆ ಇರುವ ವೀರಗಲ್ಲು ಕ್ರಿ.ಶ. ೧೫-೧೬ ನೇ ಶತಮಾನದ್ದಾಗಿದೆ. ವೀರನ ಈ ಶಿಲ್ಪವು ಒಂದೇ ಪಟ್ಟಿಕೆಯಲ್ಲಿದೆ. ವೀರನು ಕುದುರೆಯ ಮೇಲೆ ಏರಿ ಹೊರಟಂತೆ ಚಿತ್ರಿಸಲಾಗಿದೆ.

ವೀರನು ಎಡಗೈಯಲ್ಲಿ ಕುದುರೆಯ ಲಗಾಮನ್ನು ಬಲಗೈಯಲ್ಲಿ ಖಡ್ಗ ಹಿಡಿದು ಮೇಲಕ್ಕೆ ಎತ್ತಿರುವನು. ಸೊಂಟದಲ್ಲಿ ಕತ್ತಿ ಇದ್ದು, ಕುದುರೆಯ ಮುಂಭಾಗದಲ್ಲಿ ಇಬ್ಬರು ಸ್ತ್ರೀಯರನ್ನು ಕಿರಿದಾಗಿ ತೋರಿಸಲಾಗಿದೆ. ಶಿಲ್ಪದ ನಿರೂಪಣೆಗೆ ಹೆಚ್ಚಿನ ಆದ್ಯತೆ ನೀಡಿಲ್ಲದಿರುವುದನ್ನು ಗಮನಿಸಬಹುದು. ಕುದುರೆಯ ಕತ್ತು ಉದ್ದವಾಗಿರುವಂತೆ, ವೀರನ ಸೊಂಟ ತೆಳುವಾಗಿರುವಂತೆ ಚಿತ್ರಿಸಲಾಗಿದೆ. ಶಿಲ್ಪದ ನಿರೂಪಣೆಯ ದೃಷ್ಟಿಯನ್ನು ನೋಡಿದರೆ ಕ್ರಿ.ಶ.ಸುಮಾರು ೧೪-೧೫ನೇ ಶತಮಾನದ್ದಾಗಿದೆ.

**ಮಹಾಸತಿಗಲ್ಲುಗಳು**

ಸತಿ ಶಬ್ದ ಪರಿಮಿತ ಅರ್ಥದಲ್ಲಿ ಗಂಡನ ಮರಣದ ನಂತರ ಪತ್ನಿ ಸ್ವ-ಇಚ್ಛೆಯಿಂದ ಮರಣ ಹೊಂದುವುದನ್ನು ಸೂಚಿಸುತ್ತದೆ. ಇದು ಸತಿ ಪದ್ಧತಿಯಾಗಿ ರೂಪಗೊಂಡು ಇತಿಹಾಸದ ಬಹುಮುಖ್ಯ ಭಾಗವಾಗಿ ಪರಿಣಮಿಸಿದೆ. ವಿಶಾಲ ಭಾರತದಲ್ಲಿ ಅತಿ ಪೂರ್ವಕಾಲದಿಂದಲ್ಲಿ ಸತಿ ಆಚರಣೆ ನಡೆದು ಕೊಂಡು ಬಂದ ಬಗೆಗೆ ಆಧಾರಗಳು ದೊರಕುತ್ತವೆ. ಭೂಶೋಧನೆಯ ಸಾಮಗ್ರಿಗಳು ವೇದ-ಶಾಸ್ತ್ರ-ಪುರಾಣಗಳು, ಮಹಾಕಾವ್ಯ-ಕಾವ್ಯಗಳು, ಸತಿಗಲ್ಲುಗಳು ಈ ಮೊದಲಾದ ಆಧಾರಗಳ ಹಿನ್ನೆಲೆಯಲ್ಲಿ ಕ್ರಿ.ಪೂ.೧೦.೦೦೦ ವರ್ಷಗಳ ಕಾಲದಿಂದ ಆಧುನಿಕ ಭಾರತದ ಇಂದಿನವರೆಗೂ ಆಚರಣೆಯಲ್ಲಿ ಉಳಿದುಕೊಂಡ ಬಂದ ಸತಿ ಪದ್ಧತಿಯ ಕುರಿತು ಒಂದು ಸ್ಪಷ್ಟ ಚಿತ್ರ ಕೊಡಲು ಸಾಧ್ಯವಿದೆ.[೨]

ಅಂದಿನ ಕಾಲದಲ್ಲಿ ಪತ್ನಿಯು ಸಹಗಮನ ಮಾಡಲು ಇಂಥದ್ದೆ ಕಾರಣಕ್ಕಾಗಿ ಮಡಿದಿರಬೇಕೆಂಬ ಯಾವುದೇ ನಿಯಮವಿದ್ದಂತೆ ಕಾಣುವುದಿಲ್ಲ. ಗಂಡನು ಯುದ್ಧದಲ್ಲಿಯೋ, ಆತ್ಮಬಲಿ ಮಾಡಿಕೊಂಡೋ ಯಾವುದೇ ಹೋರಾಟದಲ್ಲಿ ಮರಣ ಹೊಂದಿದಾಗ ಸತಿಯು ಆತ್ಮಬಲಿ ಮಾಡಿಕೊಂಡಾಗ ಅಥವಾ ಅವಳು ಯಾವುದೋ ಹೋರಾಟ ಮಾಡಿ ಮಡಿದಾಗ ನಿರ್ಮಿಸಿದ ಶಿಲೆಯನ್ನು ನಾವು ಮಹಾಸತಿಗಲ್ಲುಗಳು ಎಂದು ಕರೆಯುತ್ತವೆ. ಈ ರೀತಿಯ ಮಹಾಸತಿಗಲ್ಲುಗಳು ಕಣಕುಪ್ಪೆ ಪರಿಸರದಲ್ಲಿ ಸಾಕಷ್ಟಿವೆ ಪ್ರಮುಖವಾದವುಗಳನ್ನು ಈ ಕೆಳಗಿನಂತೆ ಅಧ್ಯಯನ ಮಾಡಲಾಗಿದೆ.

ಅಸಗೋಡು ಕಡ್ಲೆ ಬಸಪ್ಪ ದೇವಾಲಯದ ಮುಂದಿರುವ ವೀರ ಮಹಾಸತಿ ಗಲ್ಲು ಕ್ರಿ.ಶ. ೧೫-೧೬ ನೇ ಶತಮಾನದ್ದಾಗಿದೆ. ಶಿಲ್ಪದಲ್ಲಿ ಮೂರು ದೃಶ್ಯಗಳಿವೆ. ಮೊದಲ ದೃಶ್ಯದಲ್ಲಿ ಇಬ್ಬರು ವೀರರು ವೈರಿ ಪಡೆಯವರ ವಿರುದ್ಧ ಮಲ್ಲಯುದ್ಧ ಮಾಡುತ್ತಿದ್ದಾರೆ. ಇಬ್ಬರು ವೈರಿಗಳು ಕೆಳಗಡೆ ಬಿದ್ದಿದ್ದಾರೆ. ವೀರ ಒಬ್ಬ ವೈರಿಯನ್ನು ಕಾಲುಕೆಳಗೆ ತುಳಿದಿದ್ದಾನೆ. ವೀರರು ತಲೆಯ ಹಿಂದ ತುರುಬು ಸೊಂಟದಲ್ಲಿ ಚಾಕುಗಳನ್ನು ಹೊಂದಿದ್ದಾರೆ. ವೈರಿ ಪಡೆಯಲ್ಲಿ ಒಬ್ಬನಿಗೆ ಉದ್ದನೆಯ ಕೂದಲನ್ನು ತೋರಿಸಲಾಗಿದೆ. ಈತ ಯಾವುದೋ ಬುಡಕಟ್ಟು ಸಮುದಾಯದವನಿರಬೇಕು. ಎಲ್ಲರೂ ಕಟೀವಸ್ತ್ರಧಾರಿಗಳಾಗಿದ್ದಾರೆ.

ಎರಡನೇಯ ದೃಶ್ಯದಲ್ಲಿ ಮಡಿದ ವೀರ ಹಾಗೂ ಸತಿಯನ್ನು ವಿಮಾನದಲ್ಲಿ ಕೂರಿಸಿಕೊಂಡು ಇಬ್ಬರು ಅಪ್ಸರೆಯರು ಸ್ವರ್ಗಕ್ಕೆ ಕರೆದುಕೊಂಡು ಹೋಗುತ್ತಿದ್ದಾರೆ. ವೀರ ಮಡಿದ ಸುದ್ದಿ ಕೇಳಿ ಪತ್ನಿಯು ಮಡಿದಿದ್ದಾಳೆ. ಹಾಗಾಗಿ ಈ ದೃಶ್ಯದಲ್ಲಿ ದಂಪತಿಗಳನ್ನು ತೋರಿಸಲಾಗಿದೆ. ವಿಮಾನವು ಅಲಂಕಣೀಯವಾಗಿದೆ.

ಸ್ವರ್ಗದ ದೃಶ್ಯದಲ್ಲಿ ಯತಿಯು ಎಡಗೈಯಲ್ಲಿ ಗಂಟೆ ಬಲಗೈಯಲ್ಲಿ ಆರತಿ ತಟ್ಟೆ ಹಿಡಿದು ಶಿವಲಿಂಗಕ್ಕೆ ಪೂಜಿಸುತ್ತಿರುವ ದೃಶ್ಯವಿದೆ. ಯತಿಯು ತಲೆಗೆ ರುಮಾಲನ್ನು ಸುತ್ತಿಕೊಂಡಿರುವನು. ಶಿವಲಿಂಗದ ಎದುರುಗಡೆ ಸತಿ ಪತಿಯರು ಪ್ರತ್ಯೇಕ ಪೀಠದ ಮೇಲೆ ಕೈ ಮುಗಿದು ಕುಳಿತಿರುವರು. ಶಿವಲಿಂಗದ ರುದ್ರಭಾಗದಲ್ಲಿ ರುದ್ರಾಕ್ಷಿ ಮಾಲೆ ಹಾಕಲಾಗಿದೆ. ಈ ಶಿಲ್ಪವನ್ನು ಯಾವುದೋ ಹೋರಾಟದಲ್ಲಿ ವೀರ ಮಡಿದಿದ್ದಾಕ್ಕಾಗಿ ಸತಿಯು ಸಹಗಮನ ಮಾಡಿದ್ದಾಳೆ. ಆ ನೆನಪಿಗಾಗಿ ಹಾಕಿಸಲಾಗಿದೆ.

ಕಣಕುಪ್ಪೆ ಕೋಟೆಯ ಒಳಗಿರುವ ವೀರಮಹಾಸತಿ ಗಲ್ಲು ಕ್ರಿ.ಶ. ೧೬ ನೇ ಶತಮಾನದ್ದಾಗಿದೆ. ಒಂದೇ ದೃಶ್ಯದಲ್ಲಿರುವ ಈ ಶಿಲ್ಪದಲ್ಲಿ ಇಬ್ಬರು ವೀರರು ಹಾಗೂ ಒಬ್ಬ ಸತಿಯನ್ನು ತೋರಿಸಲಾಗಿದೆ. ಸತಿಯು ಇಬ್ಬರ ನಡುವೆ ಕೈ ಮುಗಿದು ನಿಂತಿರುವಳು. ನೆರಿಗೆಯುಳ್ಳ ಸೀರೆ, ಕಿವಿಯೋಲೆ, ಕಂಠಹಾರ, ತೋಳಬಂದಿ ವಿವಿಧ ರೀತಿಯ ಆಭರಣಗಳನ್ನು ಧರಿಸಿರುವಳು, ಸತಿಯ ಬಲಕ್ಕೆ ನಿಂತ ವೀರ ಬಲಗೈಯಲ್ಲಿ ಕತ್ತಿ ಹಿಡಿದು ಎಡಗೈಯನ್ನು ಕೆಳಕ್ಕೆ ಇಳಿಬಿಟ್ಟಿರುವನು. ಕಟೀ ವಸ್ತ್ರಧಾರಿಯಾಗಿ ತಲೆಗೆ ರುಮಾಲನ್ನು ಸುತ್ತಿದ್ದಾನೆ. ಎಡಗಡೆ ನಿಂತಿರುವ ವೀರ ಬಲಗೈಯಲ್ಲಿ ಉದ್ದನೆಯ ಕತ್ತಿ ಹಿಡಿದು ಎಡಗೈಯನ್ನು ಕೆಳಗೆ ಇಳಿಬಿಟ್ಟಿರುವನು. ಈ ಶಿಲ್ಪದ ಲಕ್ಷಣಗಳನ್ನು ಗಮನಿಸಿದರೆ ಸತಿಯ ಬಲಕ್ಕೆ ನಿಂತಿರುವ ವ್ಯಕ್ತಿ ವೀರನಿರಬೇಕು. ಎಡಗಡೆಯವನು ಸೇವಕನಿರಬೇಕು. ಇವರಿಬ್ಬರು ಯಾವುದೋ ಕಾದಾಟದಲ್ಲಿ ಮಡಿದಿದ್ದಾರೆ ಅವರ ಜೊತೆಗೆ ವೀರನ ಸತಿಯು ಮಡಿದಿದ್ದಾಳೆ. ಆ ನೆನಪಿಗಾಗಿ ಈ ಶಿಲ್ಪವನ್ನು ನೆಡಲಾಗಿದೆ.

ಅಣಬೂರು ಊರ ದ್ವಾರ ಬಾಗಿಲಲ್ಲಿ ನಿಲ್ಲಿಸಿರುವ ಮಹಾಸತಿಗಲ್ಲು ಕ್ರಿ.ಶ. ೧೬-೧೭ ನೇ ಶತಮಾನದ್ದಾಗಿದೆ. ಮಹಾಸತಿ ಶಿಲ್ಪಗಳಲ್ಲಿ ಸಾಮಾನ್ಯವಾಗಿ ಒಬ್ಬರು, ಇಬ್ಬರು, ಮೂರು, ನಾಲ್ಕು, ಐದು ಜನರು ಸತಿ ಆಗುವುದನ್ನು ಕಾಣುತ್ತೇವೆ. ಅದಕ್ಕೂ ವಿಶೇಷ ಎಂದರೆ ಏಳು ಜನ ಸತಿ ಹೋಗಿರುವುದನ್ನು ಅಲ್ಲೊಂದು, ಇಲ್ಲೊಂದು ಉದಾಹರಣೆಗಳನ್ನು ಗಮನಿಸಬಹುದು. ಅದರಲ್ಲಿ ಒಂದು ಹಿರಿಯೂರು ತಾಲ್ಲೂಕಿನ ತವಂದಿ ಗ್ರಾಮದ ಮಹಾಸತಿಗಲ್ಲು. ಆದರೆ ಇಲ್ಲಿರುವ ಮಹಾಸತಿಗಲ್ಲು ಅದಕ್ಕಿಂತ ಸ್ವಲ್ಪ ಹೆಚ್ಚಿನ ವಿಷಯ ತಿಳಿಸುವುದು. ಇಲ್ಲಿ ಹತ್ತು ಜನ ಸ್ತ್ರೀಯರು ಸತಿ ಹೋಗಿರುವುದನ್ನು ಕಾಣುತ್ತೇವೆ. ಪ್ರಸ್ತುತ ಗ್ರಾಮದ ಮಧ್ಯದಲ್ಲಿ ನಿಲ್ಲಿಸಲಾಗಿರುವ ಈ ಮಹಾಸತಿ ಶಿಲ್ಪವನ್ನು ಗ್ರಾಮದ ಹೊರ ಹೊಲಯದಲ್ಲಿರವ ಬೇಚರಾಕ್ ಗ್ರಾಮದಿಂದ ತಂದು ಪ್ರತಿಷ್ಠಾಪಿಸಲಾಗಿದೆ. ಈ ಶಿಲ್ಪದಲ್ಲಿ ನಾಲ್ಕು ದೃಶ್ಯಗಳಿದ್ದು, ಕೆಳಗಿನ ದೃಶ್ಯದಲ್ಲಿ ವೀರನ ಬಲ ಬದಿಯಲ್ಲಿ ಇಬ್ಬರು ಸತಿಯನ್ನು ಎಡ ಬದಿಯಲ್ಲಿ ಮೂವರು ಸತಿಯರನ್ನು ತೋರಿಸಲಾಗಿದೆ. ಎಡಬದಿಯ ಮೂವರು ಸತಿಯರ ನಂತರ ಕಿರುಗಂಬದ ಚಿತ್ರವನ್ನು ತೋರಿಸಿರುವರು. ಸ್ತಂಭದ ಮೇಲೆ ಬೋಧಿಗೆಯಿದೆ. ಆದರೆ ಈ ಸ್ತಂಭ ಯಾವುದರ ಪ್ರತೀಕ ಎನ್ನುವುದು ತಿಳಿಯಬೇಕಾಗಿದೆ. ಇದೇನಾದರೂ ಪೂರ್ಣಕಲಶದ ಅಥವಾ ಮಂಗಲ ಫಲಕ ಇರಬಹುದೇ?

ನಾಲ್ವರು ಸತಿಯರ ಕೈ ಮುಗಿದಿದ್ದರೆ ಎಡ ಕೊನೆಯಲ್ಲಿರುವವಳು ಬಲಗೈಯನ್ನು ಮೇಲಕ್ಕೆತ್ತಿ ಎಡಗೈ ಕೆಳಗೆ ಬಿಟ್ಟಿರುವಳು. ಎರಡನೆಯ ದೃಶ್ಯದಲ್ಲಿ ಕುದುರೆಯಲ್ಲಿ ಕುಳಿತ ವೀರನು ವೈರಿಯೊಡನೆ ಹೋರಾಡುತ್ತಿರುವನು. ಆತನು ತನ್ನ ಎಡಗೈಯಲ್ಲಿ ಕುದುರೆಯ ಲಗಾಮು ಹಿಡಿದು ಬಲಗೈಯಲ್ಲಿರುವ ಕತ್ತಿಯನ್ನು ಮೇಲಕ್ಕೆತ್ತಿ ಹೋರಾಡುತ್ತಿರುವಂತಿದೆ. ವೀರನ ಪಡೆಯಲ್ಲಿ ಮತ್ತಿಬ್ಬರು ಸಹಚರರಿರುವರು. ಇವರಲ್ಲಿ ಒಬ್ಬ ಕುದುರೆಯ ಮುಂಭಾಗದಲ್ಲಿ, ಮತ್ತೊಬ್ಬ ಕುದುರೆಯ ಹಿಂಭಾಗದಲ್ಲಿರುವನು. ಇವರುಗಳು ಕಾಲಾಳುಗಳಾಗಿದ್ದು ಕೈಯಲ್ಲಿ ಬಿಲ್ಲುಬಾಣಗಳನ್ನಿಡಿದು ಕಾದಾಡುತ್ತಿರುವರು. ವೈರಿ ದಳದಲ್ಲಿ ಒಬ್ಬನನ್ನು ಮಾತ್ರ ತೋರಿಸಲಾಗಿದೆ. ಆತ ಕಾಲಾಳು. ಇನ್ನು ಶಿಲ್ಪದ ಬಹುಮುಖ್ಯ ಭಾಗ ಅಂದರೆ ಮೂರನೇ ದೃಶ್ಯ ಈ ದೃಶ್ಯದಲ್ಲಿ ವೀರ ಕೈ ಮುಗಿದು ಕುಳಿತಿರುವನು. ಈತನ ಬಲಬದಿಯಲ್ಲಿ ನಾಲ್ವರು ಸತಿಯರು ನಿಂತಿರುವರು. ಇವರ ವೇಷ ಭೂಷಣಗಳ ಬಗ್ಗೆ ಹೇಳುವುದಾದರೆ ನೆರಿಗೆಯುಳ್ಳ ಉದ್ದನೆಯ ಲಂಗ ಹಾಗೂ ರವಿಕೆಯನ್ನು ಧರಿಸಿರುವರು ವಿವಿಧ ರೀತಿಯ ಆಭರಣಗಳನ್ನು ಧರಿಸಿದ್ದಾರೆ. ಮೇಲಿನ ಅಂದರೆ ಕೊನೆಯ ದೃಶ್ಯದಲ್ಲಿ ವೀರ ಶಿವಲಿಂಗಕ್ಕೆ ಕೈ ಮುಗಿದು ನಿಂತಿರುವನು. ಬದಿಯಲ್ಲಿ ಯತಿಯು ಶಿವಲಿಂಗಕ್ಕೆ ಪೂಜಿಸುತ್ತಿರುವನು. ಯತಿಯು ಉದ್ದನೆಯ ಕೂದಲು ಹಾಗೂ ಕೈಯಲ್ಲಿ ವಸ್ತ್ರ ಹಿಡಿದಿರುವನು. ಯತಿಯ ಹಿಂಭಾಗದಲ್ಲಿ ನಾಲ್ವರು ಸತಿಯರು ಹಾಗೂ ವೀರನ ಬಲಕ್ಕೆ ಒಬ್ಬಳು ಒಟ್ಟು ಐವರು ಸತಿಯರನ್ನು ಈ ದೃಶ್ಯದಲ್ಲಿ ಚಿತ್ರಿಸಿರುವರು. ಸೂರ್ಯ, ಚಂದ್ರ, ನಂದಿಯನ್ನು ತೋರಿಸಿರುವರು.

ಒಟ್ಟಾರೆ ಶಿಲ್ಪದಲ್ಲಿ ಕೆಳಗಿನ ಮತ್ತು ಮೇಲಿನ ದೃಶ್ಯಗಳಲ್ಲಿ ಐದು ಜನ ಸತಿಯರನ್ನು ಹಾಗೂ ನಾಲ್ಕನೇ ದೃಶ್ಯದಲ್ಲಿ ಹತ್ತು ಜನ ಸತಿಯರನ್ನು ತೋರಿಸಿರುವರು. ಪ್ರಾಯಶಃ ಕೆಳಗೆ ಮತ್ತು ಮೇಲಿನ ಭಾಗದಲ್ಲಿ ಸ್ಥಳದ ಅಭಾವವಿರುವುದರಿಂದ ಐದು ಜನರನ್ನು ಮಾತ್ರ ತೋರಿಸಿರಬಹುದು. ಇಲ್ಲಿ ಹತ್ತು ಜನ ಸ್ತ್ರೀಯರು ಸತಿ ಹೋದ ಬಗ್ಗೆ ಸ್ಪಷ್ಟವಾಗಿ ತಿಳಿಸಲು ಹತ್ತು ಜನ ಸತಿಯರನ್ನು ಚಿತ್ರಿಸಲಾಗಿದೆ. ಇವರೆಲ್ಲ ಆತನ ಸತಿಯರಾಗಿರಬೇಕು. ಆತ ಯಾವುದೋ ಹೋರಾಟದಲ್ಲಿ ಸ್ವರ್ಗಸ್ಥನಾದುದರಿಂದ ಆತನ ಸತಿಯರೆಲ್ಲರೂ ಒಟ್ಟಾಗಿ ಸತಿ ಆಚರಿಸಿರಬಹುದು. ವೀರನೊಬ್ಬ ಮಡಿದುದಕ್ಕಾಗಿ ಆತನ ಹತ್ತು ಜನ ಹೆಂಡತಿಯರು ಸತಿಯೋದುದು ಅಂದಿನ ಪತಿ ಭಕ್ತಿ ಹಾಗೂ ವೀರನ ಪೌರುಷ ಗೌರವವನ್ನು ಈ ಶಿಲ್ಪ ನಿರೂಪಿಸುತ್ತದೆ. ಪ್ರಸ್ತುತ ಶಿಲ್ಪದಲ್ಲಿರುವ ವೀರ ಹಾಗೂ ಆತನ ಕುದುರೆಯ ಅಲಂಕರಣವನ್ನು ಗಮನಿಸಿದರೆ ಈತನ ಪ್ರಮುಖ ವ್ಯಕ್ತಿಯಾಗಿರಬಹುದೆಂದು ಹೇಳಬಹುದು.

ಅಣಬೂರು ಊರ ದ್ವಾರ ಬಾಗಿಲಲ್ಲಿ ನಿಲ್ಲಿಸಿರುವ ಸ್ತ್ರೀ ಮಹಾಸತಿಗಲ್ಲು ಕ್ರಿ.ಶ. ೧೬-೧೭ ನೇ ಶತಮಾನದ್ದಾಗಿದ್ದು ಈ ಶಿಲ್ಪ ಮೂರು ದೃಶ್ಯಗಳಲ್ಲಿದೆ. ಕೆಳಗಿನ ದೃಶ್ಯದಲ್ಲಿ ಹಂಸ ಹಾಗೂ ಸತಿಯನ್ನು ತೋರಿಸಲಾಗಿದೆ. ಮಹಾಸತಿಗಲ್ಲಿನಲ್ಲಿ ಹಂಸವನ್ನು ತೋರಿಸಿರುವುದು ಅಪರೂಪವೇ ಸರಿ. ಇದಕ್ಕೆ ಅಭಿಮುಖವಾಗಿರುವ ಸತಿಯು ತನ್ನ ಬಲಗೈಯನ್ನು ಮೇಲಕ್ಕೆತ್ತಿ ಎಡಗೈಯನ್ನು ಕೆಳಗೆ ಇಳಿಬಿಟ್ಟಿದ್ದಾಳೆ. ಈ ಸತಿಯ ಶಿಲ್ಪವನ್ನು ಗಮನಿಸಿದರೆ ಹಾಡುವ ಭಂಗಿಯಲ್ಲಿದ್ದಂತಿದೆ. ಎರಡನೇ ದೃಶ್ಯದಲ್ಲಿ ವೀರನು

ಕುದುರೆಯ ಮೇಲೆ ಕುಳಿತಿರುವನು. ಈತ ತನ್ನ ಎಡಗೈಯಲ್ಲಿ ಕುದುರೆಯ ಲಗಾಮನ್ನು ಬಲಗೈಯಲ್ಲಿ ಈಟಿಯನ್ನು ಹಿಡಿದಿರುವನು. ಕುದುರೆಯು ತನ್ನ ಮುಂದಿನ ಎರಡೂ ಕಾಲುಗಳನ್ನು ಮೇಲಕ್ಕೆತ್ತಿ ನೆಗೆಯುತ್ತಿರುವ ಭಂಗಿಯಲ್ಲಿದೆ. ಈ ಕುದುರೆಯನ್ನು ಮಾವುತನೊಬ್ಬ ಹಿಡಿದಿರುವನು. ಇಲ್ಲಿಯೂ ಕುದುರೆಯ ವೇಷ ಭೂಷಣ ಅಲಂಕಾರ ಗಮನ ಸೆಳೆಯುವುದು. ಮೇಲಿನ ದೃಶ್ಯವು ಎರಡು ಭಾಗಗಳಲ್ಲಿರುವಂತಿದೆ. ಕೆಳಗಿನ ಭಾಗದಲ್ಲಿ ದಂಪತಿಗಳಿಬ್ಬರು ಕೈ ಮುಗಿದು ನಿಂತಿರುವರು. ವೀರನ ಎಡಬದಿಯಲ್ಲಿ ಯತಿಯು ಶಿವಲಿಂಗಕ್ಕೆ ಎಡಗೈಯಲ್ಲಿ ತಟ್ಟೆ ಬಲಗೈಯಲ್ಲಿ ಗಂಟೆ ಹಿಡಿದು ಪೂಜಿಸುತ್ತಿದ್ದಾನೆ. ಮೇಲಿನ ಭಾಗದಲ್ಲಿ ಶಿವಲಿಂಗ ಹಾಗೂ ಬದಿಯಲ್ಲಿ ಕುಳಿತ ನಂದಿಯಿದೆ. ಶಿವಲಿಂಗದ ಮೇಲ್ಭಾಗದಲ್ಲಿ ಹೂವಿನ ಹಾರದ ಅಲಂಕರಣೆ ಇದೆ. ಶಿಲ್ಪದ ಮೇಲ್ತುದಿಯಲ್ಲಿ ಸೂರ್ಯ ಚಂದ್ರ ಇರುವರು. ಒಟ್ಟಾರೆ ಶಿಲ್ಪದಲ್ಲಿ ಸತಿಯೊಂದಿಗೆ ಹಂಸ ತೋರಿಸಿರುವುದು ವಿಶೇಷ. ಈ ರೀತಿಯ ಶಿಲ್ಪಗಳನ್ನು ಸಾಮಾನ್ಯವಾಗಿ ವಿಜಯನಗರ ಕಾಲದಲ್ಲಿ ಕಾಣಬಹುದು.

# ಕೊನೆಟಿಪ್ಪಣಿ

೦೧. ಡಾ.ಚಿದನಂದ ಮೂರ್ತಿ ಎಂ., ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಪುಟ-೧೩

೦೨. ರಾಜಶೇಖರಪ್ಪ ಬಿ., ದುರ್ಗಶೋಧನ, ಪುಟ-೨೩೮

೦೩. ಗೋಪಿನಾಥರಾವ್ ಟಿ.ಎ., ಎಲಿಮುಟ್ಸ್ ಆಫ್ ಹಿಂದೂ ಐಕೋನಾಗ್ರಾಫಿ ಸಂಪುಟ-೨, ಪುಟ-೩೮೩

೦೪. ಅದೇ, ಪುಟ-೩೮೪

೦೫. ಅದೇ, ಪುಟ-೩೩೭

೦೬. ಅದೇ, ಪುಟ-೩೮೪

೦೭. ಅದೇ, ಪುಟ-೩೮೮

೦೮. ಅದೇ, ಪುಟ-೩೮೬

೦೯. ಶೇಷಶಾಸ್ತ್ರಿ ಆರ್., ಕರ್ನಾಟಕದ ವೀರಗಲ್ಲುಗಳು, ಪುಟ-೩೦

೧೦. ಅದೇ, ಪುಟ-೩೦

೧೧. ಎ.ಕ.ಸಂ. VIII, ಮಾಲೂರು ಸಂಖ್ಯೆ-೪೬

೧೨. ಶೇಠ ಬಿ.ಎಸ್., ಕರ್ನಾಟಕದಲ್ಲಿ ಸತಿಪದ್ಧತಿ, ಪುಟ-೧೫

## ಅಧ್ಯಾಯ - ಆರು

# ಸಮಾರೋಪ

ಚಿತ್ರದುರ್ಗ ಮತ್ತು ದಾವಣಗೆರೆ ಜಿಲ್ಲೆಗಳು ಕರ್ನಾಟಕ ಇತಿಹಾಸದಲ್ಲಿ ಮಹತ್ವದ ಸ್ಥಾನಗಳನ್ನು ಪಡೆದುಕೊಂಡಿವೆ. ಈ ಜಿಲ್ಲೆಗಳ ಭೌಗೋಳಿಕ ಪರಿಸರದಲ್ಲಿ ಶಿಲಾಯುಗದ ಕಾಲಂದಿಂದಲೂ ಪ್ರಸ್ತುತದವರೆಗೆ ಮಾನವ ಬದುಕಿದ ಕುರುಹುಗಳು, ಆಳ್ವಿಕೆ ನಡೆಸಿದ ವಿವಿಧ ಕಾಲಘಟ್ಟದ ರಾಜಮನೆತನಗಳು ಕಂಡುಬರುತ್ತವೆ. ಹಾಗೆಯೇ ದಾವಣಗೆರೆ ಜಿಲ್ಲೆ ಜಗಳೂರು ತಾಲ್ಲೂಕು ಚರಿತ್ರೆಗೆ ತನ್ನದೇ ಆದ ಕಾಣಿಕೆ ನೀಡಿದೆ ಕಣಕುಪ್ಪೆ. ಜಗಳೂರು ತಾಲ್ಲೂಕು ಕೇಂದ್ರದಿಂದ ಅನತಿ ದೂರದಲ್ಲಿರುವ ಒಂದು ಐತಿಹಾಸಿಕ ಸ್ಥಳ ಕ್ರಿ.ಶ. ೧೭ ರಿಂದ ೧೯ನೇ ಶತಮಾನದವರೆಗೆ ಆಳಿದ ನಾಯಕ ಪಾಳೆಯಗಾರರ ರಾಜಧಾನಿಯಾಗಿ, ಅನಂತರ ತಾಲ್ಲೂಕು ಕೇಂದ್ರವಾಗಿತ್ತು. ಇಂಥ ಕೋಟೆ, ರಕ್ಷಣೆಗೋಡೆ, ಬತೇರಿ, ದೇವಾಲಯ, ಬಾವಿ, ಕೆರೆ, ಕಟ್ಟೆ ಇತರ ಸ್ಮಾರಕಗಳು ಭಗ್ನಗೊಂಡಿದ್ದು ತೀರಾ ಅವಾಜ್ಞೆಗೊಳಗಾಗಿವೆ. ಚಾರಿತ್ರಿಕ ಘಟನೆಗಳನ್ನು ಮುಂದಿನ ತಲೆಮಾರಿಗೆ ತಿಳಿಸುವ ನಿಟ್ಟಿನಲ್ಲಿ ಪ್ರಸ್ತುತ ಅಧ್ಯಯನ ಕೈಗೊಳ್ಳಲಾಗಿದೆ. ಇಲ್ಲಿನ ರಾಜಕೀಯ, ಸಾಮಾಜಿಕ, ಆರ್ಥಿಕ, ಶಿಕ್ಷಣ, ಧಾರ್ಮಿಕ, ವಾಸ್ತುಶಿಲ್ಪ, ಹೀಗೆ ಹತ್ತು ಹಲವು ಸಂಗತಿಗಳನ್ನು ಪ್ರಾಚ್ಯಾವಶೇಷಗಳ ನೆರವಿನೊಂದಿಗೆ ಕಟ್ಟಿಕೊಡಲಾಗಿದೆ. ಕಣಕುಪ್ಪೆ ಮೂಲಕ ಈ ಪರಿಸರದ ಶಿಲಾಯುಗ, ಚರಿತ್ರೆ ಆರಂಭ ಕಾಲದ ನೆಲೆಗಳನ್ನೂ ಗುರುತಿಸಲಾಗಿದೆ. ಅಸಗೋಡು, ಬಿಳಿಚೋಡು ಇತರ ಸ್ಥಳಗಳು ಮಹತ್ವದಿಂದ ಕೂಡಿವೆ. ಧಾರ್ಮಿಕವಾಗಿ ಕಣಕುಪ್ಪೆ ಗವಿಮಠ ಇಲ್ಲಿ ಧಾರ್ಮಿಕ ಕ್ಷೇತ್ರವಾಗಿ ಹೊಸ ಬೆಳವಣಿಗೆ ಹೊಂದಿದೆ. ಬೇಟೆ, ಪಶುಪಾಲನೆ ಮತ್ತು ಕೃಷಿ ವ್ಯವಸ್ಥೆಗಳಲ್ಲದೆ ರಾಜ ಪ್ರಭುತ್ವದಲ್ಲಿ ವಿವಿಧ ಅರಸರ ಆಳ್ವಿಕೆ ಅವರ ಕೊಡುಗೆಗಳು ಗಮನಾರ್ಹವಾಗಿವೆ. ಚಿತ್ರದುರ್ಗ, ಹರಪನಹಳ್ಳಿ, ಗುಡೇಕೋಟೆ ನಾಯಕರುಗಳ ಈ ಪರಿಸರದಲ್ಲಿ ಆಳ್ವಿಕೆ ನಡೆಸಿದರೂ ಉಚ್ಚಂಗಿ ದುರ್ಗ, ಗುಡೇಕೋಟೆ ಇಲ್ಲಿಗೆ ಹತ್ತಿರವಿದ್ದು ಐತಿಹಾಸಿಕ ಸ್ಥಳಗಳಾಗಿವೆ. ಮಠ-ಮಂದಿರ, ಗುಡಿಗೋಪುರ, ಶಾಸನ, ಶಿಲ್ಪಗಳು ಈ ಪರಿಸರದ ಭವ್ಯ ಇತಿಹಾಸವನ್ನು ತೆರೆದಿಡುತ್ತವೆ.

ಪ್ರಾಚೀನ ಇತಿಹಾಸ ಮತ್ತು ಪರಂಪರೆಯನ್ನು ಹೊಂದಿರುವ ಈ ಪರಿಸರದಲ್ಲಿ ಬೃಹತ್ ಶಿಲಾಯುಗವನ್ನು ತಿಳಿಸುವ ಕುರುಹುಗಳು, ಮೌರ್ಯರಂಭಿಯಾಗಿ ಆಳ್ವಿಕೆ ಮಾಡಿದ ಶಾತವಾಹನ, ಕದಂಬ, ಚಾಲುಕ್ಯ, ರಾಷ್ಟ್ರಕೂಟ, ಚೋಳ, ವಿಜಯನಗರ ಅರಸರುಗಳು, ಪಾಳೆಯಗಾರರು ಈ ಪ್ರದೇಶದ ಮೇಲೆ ಹಿಡಿತ ಸಾಧಿಸಿ ಕ್ರಿ.ಶ.೧೬-೧೭ನೇ ಶತಮಾನದ ಪಾಳೆಯಗಾರರ ಕಾಲದವರೆಗೆ ಸ್ವತಂತ್ರ್ಯಾಗಿ ಆಳ್ವಿಕೆ ಮಾಡಿದ ದಾಖಲೆಗಳು ಈ ಪರಿಸರದಲ್ಲಿ ದೊರಕುತ್ತವೆ. ಹಲವು ಅರಸು ಮನೆತನಗಳು ಆಳ್ವಿಕೆಗೆ ಒಳಪಟ್ಟು ಈ ಪ್ರದೇಶ, ವಿವಿಧ ಸಂಸ್ಕೃತಿಯ ಆಚಾರ-ವಿಚಾರ ಧಾರ್ಮಿಕತೆಗೆ ಒಳಪಟ್ಟಿದೆ. ಸ್ಮಾರಕಗಳಾದ ಶಾಸನ, ದೇವಾಲಯ, ಮಠ-ಮಂದಿರ, ಕೋಟೆ-ಕೊತ್ತಲ, ಶಿಲ್ಪಗಳ ಸಹಾಯದಿಂದ ಈ ಪ್ರದೇಶದ ಇತಿಹಾಸವನ್ನು ರಚನೆ ಮಾಡಬಹುದಾಗಿದೆ. ಪ್ರಸ್ತುತ ಅಧ್ಯಯನದಲ್ಲಿ ವಿವಿಧ ಅರಸು ಮನೆತನಗಳು ಆಳ್ವಿಕೆ ಮಾಡಿದ್ದು ಅನೇಕ ಕೊಡುಗೆಗಳನ್ನು ಕೊಟ್ಟು ಕುರುಹುಗಳನ್ನು ಬಿಟ್ಟು ಹೋಗಿದ್ದಾರೆ. ಹಾಗಾಗಿ ಈ ಪ್ರದೇಶವು ವಿವಿಧ ಜನರ ಸಂಸ್ಕೃತಿಯ ಆಚರಣೆಯ ಸ್ಥಳವಾಗಿತ್ತು. ಇಲ್ಲಿ ದೊರೆತ ಶಾಸನ, ದೇವಾಲಯ, ಶಿಲ್ಪಗಳ ಅಧ್ಯಯನದಿಂದ ಅವರ ಸಾಮಾಜಿಕ, ಆರ್ಥಿಕ, ರಾಜಕೀಯ ಜೀವನವನ್ನು ಅಧ್ಯಯನ ಮಾಡಬಹುದು. ಪಾಳೆಯಗಾರರ ಆಳ್ವಿಕೆ ಕಾಲದಲ್ಲಿ ಅರಸರು ಜನಸಾಮಾನ್ಯರ ಬಗ್ಗೆ ಯಾವ ರೀತಿಯ ಕಾಳಜಿ ಹೊಂದಿದ್ದರು ಎಂಬುದಕ್ಕೆ ಕಣಕುಪ್ಪೆಯಲ್ಲಿ ಕಟ್ಟಿದ ಕೋಟೆಯೇ ನಿದರ್ಶನ ಸ್ಥಳೀಯ ಕಳ್ಳಕಾಕರಿಂದ ರಕ್ಷಣೆ ಸ್ಥಳೀಯ ವಿರೋಧಿಗಳಿಂದ ರಕ್ಷಣೆಗೆ ಒಂದು ಕೋಟೆಯನ್ನು ಕಟ್ಟಿಸಿದ್ದಾರೆ.

ಈ ಪರಿಸರದ ಅಸಗೋಡು ಗ್ರಾಮದಲ್ಲಿ ದೊರೆತ ಶಾಸನೋಕ್ತ ವೀರಗಲ್ಲು ಕ್ರಿ.ಶ. ೧೧೧೦ರ ಕಾಲದ್ದಾಗಿದೆ. ಇಲ್ಲಿ ಶೈವ, ವೈಷ್ಣವ ಇತರೆ ಶಿಲ್ಪಗಳು ಹೇರಳವಾಗಿ ದೊರೆತಿವೆ. ಈ ಶಿಲ್ಪಗಳ ಸಹಾಯದಿಂದ ಅಂದಿನ ಕುಸುರಿ ಕಲೆ, ಉಡುಗೆ, ತೊಡುಗೆ, ಸಾಮಾಜಿಕ, ಆರ್ಥಿಕ ಪರಿಸ್ಥಿತಿ ಮುಂತಾದ ವಿಷಯಗಳನ್ನು ಅಧ್ಯಯನ ಮಾಡಬಹುದು. ಈ ಶಿಲ್ಪಗಳ ಸಹಾಯದಿಂದ ಅಂದು ಯಾವ ರೀತಿ ಆಯುಧಗಳನ್ನು ಬಳಸುತ್ತಿದ್ದರು ಸೈನ್ಯ ವ್ಯವಸ್ಥೆ ಹೋರಾಟ ಮಾಡುವ ರೀತಿಗಳು ಸಹ ತಿಳಿಯುತ್ತವೆ.

ಈ ಪರಿಸರದ ಇತಿಹಾಸವನ್ನು ತಿಳಿಯುವಲ್ಲಿ ದೇವಾಲಯಗಳು ಸಹಾಯವಾಗಿದೆ. ಈ ದೇವಾಲಯಗಳ ಮುಂದೆ ದೊರೆತ ಪ್ರಾಚ್ಯಾವಶೇಷಗಳ ಆಧಾರದಿಂದ ಇಲ್ಲಿ ರಾಷ್ಟ್ರಕೂಟರ ದೇವಾಲಯಗಳಿಂದ ಹಿಡಿದು ವಿಜಯನಗರದ ಕಾಲದವರೆಗಿನ ಶೈವ, ವೈಷ್ಣವ, ಶಾಕ್ತ ದೇವಾಲಯಗಳು ಕಾಣಸಿವೆ. ದೇವಾಲಯಗಳ ಮುಂದೆ ದೊರೆತ ಶಾಸನಗಳ ಆಧಾರದಿಂದ ದೇವಾಲಯಕ್ಕೆ ಸ್ಥಳೀಯ ಅರಸರುಗಳು ಕೊಟ್ಟ ದತ್ತಿ ವಿವರಗಳು, ಪ್ರಸ್ತುತ ಪ್ರದೇಶದಲ್ಲಿ ಆಳ್ವಿಕೆ ನಡೆಸಿದ ಸಾಮಂತ ನಾಯಕರುಗಳು, ಬಗ್ಗೆ ಇತಿಹಾಸ ದೊರಕುತ್ತವೆ. ಅಸಗೋಡಿನ ಒಂದು ದೇವಾಲಯ "ನೈಷ್ಠಿಕ ವೇಧಿಕರ್ತರ ಮಠ" ಆಗಿತ್ತೆಂದು ಶಾಸನದ ಆಧಾರದಿಂದ ತಿಳಿಯುತ್ತದೆ. ಈ ಅಧ್ಯಯನದಿಂದ ಅಂದಿನ ಕರಕುಶಲ ಕಲೆ, ದೇವಾಲಯಗಳ ಮೇಲಿನ ಭಿತ್ತಿ ಚಿತ್ರಗಳು, ಕಂಬಗಳ ಶೈಲಿ, ಕಂಬಗಳ ಮೇಲಿನ ಕೆತ್ತನೆಗಳು, ಅಂದಿನ ಕಾಲಾ ನೈಪುಣ್ಯತೆಗೆ ಸಾಕ್ಷಿಯಾಗಿದೆ. ಕಲ್ಲೇದೇವರ ಪುರದ ದೇವಾಲಯದ ಶಿಖರವು ನಾಗರ ಶೈಲಿಯಲ್ಲಿದ್ದು. ಶಿಖರದ ಮುಂದೆ

ಹೊಯ್ಸಳರ ಲಾಂಛನ ಆಕೃತಿಯಿದೆ. ಬಿಳಿಚೋಡು ಈಶ್ವರ ದೇವಾಲಯದ ಬಾಗಿಲುವಾಡದ ಕೆತ್ತನೆಗಳಿಂದ ಅಂದಿನ ಕಲಾಶೈಲಿ ತಿಳಿಯುತ್ತದೆ. ಈ ರೀತಿ ದೇವಾಲಯಗಳ ಅಧ್ಯಯನದಿಂದ ಅಂದು ನಡೆಯುತ್ತಿದ್ದ ಉತ್ಸವಗಳು, ಧಾರ್ಮಿಕ ವ್ಯವಸ್ಥೆ ಅರಸರುಗಳು ನೀಡಿದ ದಾನದತ್ತಿಗಳು ಮುಂತಾದ ವಿವರಗಳನ್ನು ತಿಳಿಯುತ್ತವೆ.

ಕಣಕುಪ್ಪೆ ಪರಿಸರವು ಪಾಳೆಯಗಾರರ ಕಾಲದಲ್ಲಿ ನೇರ ಆಳ್ವಿಕೆಗೆ ಒಳಪಟ್ಟಿತ್ತು ಎಂಬುದಕ್ಕೆ ಇಲ್ಲಿನ ಕೋಟೆ, ಕೊತ್ತಲ ದೇವಾಲಯಗಳೇ ಆಕರಗಳು. ಕಣಕುಪ್ಪೆ ಕೋಟೆ ಅಧ್ಯಯನದಿಂದ ಪ್ರಸ್ತುತ ಪ್ರದೇಶವನ್ನು ಎಷ್ಟು ಅರಸರು ಆಳ್ವಿಕೆ ಮಾಡಿದರು ಅಂದು ರಕ್ಷಣೆಗೆ ಯಾವ ರೀತಿ ಕ್ರಮ ಕೈಗೊಂಡಿದ್ದರು, ಅವರು ಮಾಡಿದ್ದ ಯುದ್ಧಗಳು ದಾನತ್ತಿಗಳು ತಿಳಿಯುತ್ತದೆ. ಅಂದಿನ ಕಾಲದ ಸಾಮಾಜಿಕ ಪರಿಸ್ಥಿತಿ ಅಂದು ರಕ್ಷಣೆ ಯಾವ ರೀತಿ ಒತ್ತು ಕೊಟ್ಟಿದ್ದರು. ಕಣಕುಪ್ಪೆಕೋಟೆಯಲ್ಲಿನ ನೀರಿನ ವ್ಯವಸ್ಥೆ ಇಂದಿನ ಆಧುನಿಕ ಸಮಾಜಕ್ಕೆ ಮಾದರಿಯಂತಿದೆ ದೈಹಿಕ ಶ್ರಮವಿಲ್ಲದ ಈ ವ್ಯವಸ್ಥೆ ನಿಜಕ್ಕೂ ಶ್ಲಾಘನೀಯ. ಈ ಪರಿಸರದಲ್ಲಿ ರಕ್ಷಣಾತ್ಮಕವಾಗಿ ಅನೇಕ ಬುರುಜುಗಳಿರುವುದು ಕಂಡು ಬರುತ್ತವೆ. ದೊಡ್ಡಬೊಮ್ಮನಹಳ್ಳಿ, ಮುಷ್ಟೂರು, ಭರಮಸಮುದ್ರಗಳಲ್ಲಿರುವ ಬುರುಜುಗಳೇ ಸಾಕ್ಷಿ.

ಈ ಪರಿಸರದ ಇತಿಹಾಸ ರಚನೆಗೆ ಶಿಲ್ಪಗಳು, ಮಠಮಾನ್ಯಗಳು ಸಹ ಸಹಾಯಕವಾಗಿವೆ. ಶಿಲ್ಪಗಳಲ್ಲಿ ಪ್ರಮುಖವಾಗಿ ಶೈವ, ವೈಷ್ಣ, ಶಾಕ್ತ ಇತರೆ ಅನೇಕ ಶಿಲ್ಪಗಳು ದೊರಕುತ್ತವೆ. ಇವುಗಳ ಸಹಾಯದಿಂದ ಅಂದಿನ ಕಲಾನೈಪುಣ್ಯತೆ ಅಂದಿನ ಉಡುಗೆ, ತೊಡುಗೆ, ಧಾರ್ಮಿಕ ಆಚರಣೆಗಳನ್ನು ತಿಳಿಯಲಾಗಿದೆ. ಶಿವಲಿಂಗ ನಂದಿ, ಗಣೇಶ, ವೀರಭದ್ರ, ಸಪ್ತಮಾತೃಕೆಯರ ಶಿಲ್ಪಗಳು ಪ್ರಮುಖವಾಗಿ ಕಾಣಿಸಿವೆ.

ಬಿಳಿಚೋಡಿನ ಈಶ್ವರ ದೇವಾಲಯದಲ್ಲಿ ದೊರೆತ ಲಕ್ಷ್ಮೀನಾರಾಯಣ ಶಿಲ್ಪ ಹೆಚ್ಚು ಆಕರ್ಷಣೀಯವಾಗಿರುವುದನ್ನು ಗಮನಿಸಬಹುದು. ಕ್ರಿ.ಶ.೧೧ನೇ ಶತಮಾನದಲ್ಲಿ ರಚನೆಯಾದ ಶಿಲ್ಪ ಅತ್ಯಂತ ಸೂಕ್ಷ್ಮ ಮತ್ತು ಕ್ರಮಬದ್ಧವಾಗಿ ರಚನೆಯಾಗಿದೆ. ಶಾಕ್ತ ಶಿಲ್ಪಗಳಾದ ಕಾಳಿ, ನೊರ್ಯ, ಸಪ್ತಮಾತೃಕೆ, ಸ್ಮಾರಕ ಶಿಲ್ಪ ವೀರಗಲ್ಲು ಮತ್ತು ಮಹಾಸತಿಗಲ್ಲುಗಳಿವೆ. ಕ್ರಿ.ಶ.೧೧ನೇ ಶತಮಾನದ ಅಸಗೋಡಿನ ವೀರಗಲ್ಲು ಹಾಗೂ ಅಪರೂಪವೆನಿಸಿದ ಅಣಬೂರಿನ ಮಹಾಸತಿಗಲ್ಲುಗಳು ಅಂದಿನ ಸಾಮಾಜಿಕ ಪರಿಸ್ಥಿತಿಯನ್ನು ನಿರೂಪಿಸುವಲ್ಲಿ ಸಹಾಯಕವಾಗಿವೆ. ಸಾಮಾನ್ಯವಾಗಿ ೩-೪ ಜನ ಸತಿಹೋಗಿರುವುದನ್ನು ಕಾಣುತ್ತೇವೆ ಆದರೆ ಇಲ್ಲಿ ೧೦ ಜನ ಸತಿ ಹೋಗಿರುವುದನ್ನು ಕಾಣಬಹುದು. ಈ ಪ್ರದೇಶದ ಶಾಸನಗಳನ್ನು ಅಧ್ಯಯನಕ್ಕೆ ಒಳಪಡಿಸಿದಾಗ ಅಂದು ಅರಸರುಗಳು ದೇವಾಲಯಗಳಿಗೆ ನೀಡಿದ ದತ್ತಿ ವಿವರಗಳು, ತೆರಿಗೆ ವಜಾಗೊಳಿಸಿದ ಸಂಗತಿಗಳು ತಿಳಿದು ಬರುತ್ತವೆ.

ಕ್ಷೇತ್ರ ಕಾರ್ಯದ ಸಂದರ್ಭದಲ್ಲಿ ಸಿದ್ಧಯ್ಯನ ಕೋಟೆಯಲ್ಲಿ ಒಂದು ಹೊಸ ಯಂತ್ರಗಲ್ಲಿ ಶಾಸನ, ಕಣಕುಪ್ಪೆ ಕೋಟೆಯ ಒಳಗಡೆ ಒಂದು ಸ್ವಸ್ತಿಕ್ ಆಕಾರದ ದೀಪ, ಹುಲ್ಲೆಹಾಳ ಗ್ರಾಮದಲ್ಲಿ ಮೂರು

ನವಶಿಲಾಯುಗದ ಆಯುಧಗಳು, ಬೃಹತ್ ಶಿಲಾಯುಗದ ಸಮಾಧಿಗಳು, ದೊರಕಿವೆ. ಸುಲ್ತಾನಿಪುರ, ತೊರಕೊಲಮನಹಳ್ಳಿಯಲ್ಲಿಯೂ ಸಹ ಶಿಲಾಯುಗ ಸಮಾಧಿಗಳು ಸಿಕ್ಕಿವೆ. ಗುಹೇಶ್ವರ ಬೆಟ್ಟದಲ್ಲಿ ಒಂದು ಬೃಹತ್ ಶಿಲಾಯುಗದ ೪೦ ಸಮಾಧಿಗಳಿರುವ ಒಂದು ನೆಲೆ ಪತ್ತೆ ಆಗಿದೆ. ಈ ಎಲ್ಲಾ ಅಂಶಗಳನ್ನು ಗಮನಿಸಿದರೆ ಪ್ರಸ್ತುತ ಪರಿಸರದಲ್ಲಿ ಇನ್ನೂ ಹೆಚ್ಚಿನ ಅಧ್ಯಯನಕ್ಕೆ ಒಳಪಡಿಸಿ ಉತ್ಖನನ ಕೈಗೊಂಡರೆ ಇನ್ನೂ ಹೊಸ ಅಂಶಗಳ ಮೇಲೆ ಬೆಳಕು ಚೆಲ್ಲಬಹುದು. ಕಣಕುಪ್ಪೆ ಪರಿಸರದಲ್ಲಿ ಸಾಕಷ್ಟು ಪ್ರಾಚ್ಯಾವಶೇಷಗಳು ಕಾಣಸಿದ್ದು ಅವು ಕರ್ನಾಟಕದ ಇತಿಹಾಸ ರಚನೆಗೆ ತನ್ನದೇ ಆದ ಕಾಣಿಕೆಯನ್ನು ನೀಡಿವೆ. ಅಧ್ಯಯನಕ್ಕೆ ಒಳಪಟ್ಟ ಪ್ರದೇಶದಲ್ಲಿ ಅಲ್ಲದೆ ತಾಲ್ಲೂಕಿನ ಹೊರಗಡೆ ಪ್ರದೇಶದಲ್ಲಿಯೂ ಕ್ಷೇತ್ರಕಾರ್ಯದ ಸಂದರ್ಭದಲ್ಲಿ ಕೆಲವು ಅವಶೇಷಗಳು ಪತ್ತೆ ಆಗಿವೆ. ಪ್ರಸ್ತುತ ಪರಿಸರದಲ್ಲಿ ಕಂಡುಬರುವ ಪ್ರಾಚ್ಯಾವಶೇಷಗಳು, ಕೋಟೆ ಕೊತ್ತಲ ಮಠಮಾನ್ಯ, ಬುರುಜು, ಹೊಂಡ, ಪಾಳೆಗಾರರ ಆಳ್ವಿಕೆ ಮುಂತಾದ ಅಂಶಗಳನ್ನು ಗಮನದಲ್ಲಿಟ್ಟುಕೊಂಡು ಈ ಕಿರು ಪ್ರಬಂಧದ ರಚನೆ ಮಾಡುವ ಪ್ರಯತ್ನ ಇದಾಗಿದೆ.

ಆದರೆ ಪ್ರಸ್ತುತ ಅಧ್ಯಯನವು ಅಂತಿಮವಲ್ಲ. ಈ ಅಧ್ಯಯನದಲ್ಲಿ ಬೃಹತ್ ಶಿಲಾಯುಗದ ನೆಲೆಗಳನ್ನು ಮಾತ್ರ ಗುರುತಿಸಲಾಗಿದೆ. ಉತ್ಖನನಕ್ಕೆ ಒಳಪಡಿಸಿದರೆ ಇನ್ನೂ ಸಮಗ್ರ ಮಾಹಿತಿ ಪಡೆಯಬಹುದು. ಪರಿಸರದಲ್ಲಿನ ಪ್ರಮುಖ ಶಾಸನಗಳನ್ನು ಮಾತ್ರ ಅಧ್ಯಯನ ಮಾಡಲಾಗಿದೆ. ಹೊಸ ಶಾಸನಗಳು ಇಂದಿಗೂ ಸಹ ಪತ್ತೆ ಆಗುತ್ತಿವೆ. ಎಲ್ಲಾ ಶಾಸನಗಳನ್ನು ಅಧ್ಯಯನಕ್ಕೆ ಒಳಪಡಿಸಿದರೆ. ಈ ಪರಿಸರದ ಮೇಲೆ ಹೊಸ ಬೆಳಕನ್ನು ಚೆಲ್ಲಬಹುದು. ದೇವಾಲಯಗಳು, ಶಿಲ್ಪಗಳು, ಸ್ಮಾರಕಗಳು ಹೇರಳವಾಗಿವೆ ಆಧುನಿಕ ಕಾಲದವರೆಗಿನ ದೇವಾಲಯಗಳನ್ನು ಅಧ್ಯಯನ ಮಾಡಬೇಕಾಗಿದೆ. ಒಟ್ಟಾರೆ ಈ ಪರಿಸರದಲ್ಲಿ ಸಮಗ್ರ ಅಧ್ಯಯನ ಕೈಗೊಂಡರೆ ಚರಿತ್ರೆಯ ಮೇಲೆ ಹೊಸ ಬೆಳಕನ್ನು ಚೆಲ್ಲಬಹುದು.

# ಶಾಸನಗಳ ಕೋಷ್ಟಕ

| ಕ್ರ.ಸಂ | ಗ್ರಾಮ | ಸ್ಥಳ | ರಾಜವಂಶ | ಅರಸ | ಕಾಲಮಾನ | ಸಾರಾಂಶ |
|---|---|---|---|---|---|---|
| ೦೧. | ಅಸಗೋಡು | ಕೆರೆತೋಬಿನಬಳಿ | ಕಲ್ಯಾಣಿ ಚಾಲುಕ್ಯ | ದಶವರ್ಮನ ದೊರೆ ಸತ್ಯಾಶ್ರ | ಕ್ರಿ.ಶ. ೧೦೧೦ | ಅಸಗೋಡಿನ ಗಾಮುಣ್ಣ ಅಸಗ ಕಾಡಚ ಎಂಬುವವನ ಮಗ ಕಾಡುವಾಸನೆಂಬುವನು ಬಲತ್ಕಾರದಿಂದ ಕಿತ್ತೂರಿನ ಗೋವುಗಳನ್ನು ಕದ್ದೊಯ್ಯುತ್ತಿದ್ದಾಗ ಬಿಡಿಸಿದ ವಿವರ ಇದೆ. |
| ೦೨. | ಅಸಗೋಡು | ಶಂಬುಲಿಂಗೇಶ್ವರ ದೇವಾಲಯದ ದಕ್ಷಿಣ ಕಡೆ ನೆಟ್ಟಕಲ್ಲು | ಕಲ್ಯಾಣಿ ಚಾಲುಕ್ಯ | ೧ನೇ ಸೋಮಶ್ವರ | ಕ್ರಿ.ಶ. ೧೦೫೪ | ಅಸಗೋಡಿನ ಸ್ವಯಂಭು ದೇವರಿಗೆ ವಿವಿಧ ಭೂಮಿಗಳನ್ನು ದಾನವಾಗಿ ನೀಡಿದ ವಿವರ ಹಾಗೂ ಈ ದೇವಾಲಯ ನೈಷ್ಟಿಕ ವೇದಿಕರ್ತರ ಮಠ ಆಗಿತ್ತೆಂದು ವರ್ಣಿಸುತ್ತದೆ. |
| ೦೩. | ಅಸಗೋಡು | ಶಂಬುಲಿಂಗೇಶ್ವರ ದೇವಾಲಯದ ದಕ್ಷಿಣ ಕಡೆ ನೆಟ್ಟಕಲ್ಲು | ಕಲ್ಯಾಣಿ ಚಾಲುಕ್ಯ | ೬ನೇ ವಿಕ್ರಮಾದಿತ್ಯ | ಕ್ರಿ.ಶ. ೧೧೦೯ | ಅಸಗೋಡಿನ ಶ್ರೀ ಸ್ವಯುಭ ದೇವರಿಗೆ ಭೂ ದತ್ತಿ ನೀಡಿದ ವಿವರ ಇದೆ. |
| ೦೪. | ಅಸಗೋಡು | ಶಂಭುಲಿಂಗೇಶ್ವರ ದೇವಾಲಯದ ದಕ್ಷಿಣ ಕಡೆ ನೆಟ್ಟಕಲ್ಲು | ಕಲ್ಯಾಣಿ ಚಾಲುಕ್ಯ | ಮುಮ್ಮಡಿ ತೈಲಪ | ಕ್ರಿ.ಶ. ೧೧೧೧ | ಅಸಗೋಡಿನ ಸ್ವಯಂಭು ಕಲಿದೇವನಿಗೆ ಅಡಿಕೆ, ಭೋಗಿ, ದೋಪ, ದೀಪ, ನೈವೇದ್ಯ, ಬಳೆ, ಎಲೆ ಇತ್ಯಾದಿ ನೀಡಿದ ವಿವರ ಇದೆ. |

| ೦೫. | ಬಿಳಿಚೋಡು | ಈಶ್ವರ ದೇವಾಲಯದ ಮುಂದೆ | ಕಲ್ಯಾಣಿ ಚಾಲುಕ್ಯ | | ಕ್ರಿ.ಶ.ಸು.೧೧ನೇ ಶತಮಾನ | ಮಡಿವಾಳ ಕೇತ ಎಂಬ ವೀರ ಹೋರಾಡಿ ಮಡಿದ ಜ್ಞಾಪಕಾರ್ಥಕವಾಗಿ ನಿಲ್ಲಿಸಲಾಗಿದೆ. ಬಿಳಿಚೋಡಿನ ಪ್ರಾಚೀನ ರೂಪ ಬಿಣ್ಣಚೇಡು ಆಗಿತ್ತೆಂದು ನೋಡಬುದು. |
|---|---|---|---|---|---|---|
| ೦೬. | ಬಿಳಿಚೋಡು ಮುಂದೆ | ಈಶ್ವರ ದೇವಾಲಯದ | ಕಲ್ಯಾಣಿ ಚಾಲುಕ್ಯ | ಶತಮಾನ | ಕ್ರಿ.ಶ.ಸು.೧೧ನೇ | ದೇವಾಲಯಕ್ಕೆ ದೇವದಾನ ನೀಡಿದ ವಿವರ ದೇವಾಲಯದ ಹಿಂದೆ ೭೦೦ ಮರಳ ತೋಟ, ಬೆದ್ದಲು ಭೂಮಿ ದತ್ತಿ ನೀಡಿದ ವಿವರ ಇದೆ. |
| ೦೭. | ಚದುರುಗೋಳ | ಕಲ್ಲೇಶ್ವರ ದೇವಾಲಯದ ಬಾಗಿಲ ಬಳಿ | ಕಲ್ಯಾಣಿ ಚಾಲುಕ್ಯ | ವಿಜಯಪಾಂಡ್ಯ ದೇವ | ಕ್ರಿ.ಶ. ೧೧೬೬ | ಸೋಮದೇವನಾಯಕ, ಚರ್ಮದೇವನಾಯಕರು ಶೈವ ದೇವಾಲಯಕ್ಕೆ ನೀರಾವರಿ ಭೂಮಿ, ದಾನ ನೀಡಿದ ವಿವರ ಇದೆ. |
| ೦೮. | ಕಲ್ಲೆದೆವರಪುರ | ಕಲ್ಲೇಶ್ವರ ದೇವಾಲಯದ ಒಳಗೆ | ಸೇವುಣರು | ರಾಮಚಂದ್ರದೇವ | ಕ್ರಿ.ಶ. ೧೨೦೧ | ಅರಸನು ಪುತ್ರೋತ್ಸವದ ಸಂತೋಷಕ್ಕಾಗಿ ಪ್ರಮುಖರ ಸಮಕ್ಷಮದಲ್ಲಿ ಭೂದತ್ತಿ ನೀಡಿದ ರಾಮಚಂದ್ರ ದೇವನ ವಿಜಯದ ಬಗ್ಗೆ ವಿವರ ಇದೆ. |
| ೦೯. | ಕಲ್ಲೆದೆವರಪುರ | ಕಲ್ಲೇಶ್ವರ ದೇವಾಲಯದ ಒಳಗೆ | ಹೊಯ್ಸಳರು | ಸೋಮಶ್ವರ | ಕ್ರಿ.ಶ. ೧೨೩೫ | ಮಳಣಲೇಶ್ವರ ದೇವರಿಗೆ ಭೂದಾನ ನೀಡಿದ ವಿವರ ಪಾಂಡ್ಯರಾಜ್ಯದ ಮೇಲೆ ದಂಡೆತ್ತಿ ಹೋದ ವಿವರ ಇದೆ. |
| ೧೦. | ಕೊಡದಗುಡ್ಡ | ವೀರಭದ್ರ ದೇವಸ್ಥಾನದ ಹಿಂದಿನ ಕಲ್ಲಿನಲ್ಲಿ | ವಿಜಯನಗರ | ಭದ್ರದೇವ ಒಡೆಯ | ಕ್ರಿ.ಶ. ೧೫೨೩ | ಭದ್ರದೇವ ಒಡೆಯರು ವೀರಭದ್ರ ದೇವಾಲಯದ ಸೇವೆಗಾಗಿ ನೀಡಿದ ದಾನ ಹಾಗೂ ಕೊಡದ ಗುಡ್ಡದ ಪ್ರಾಚೀನ ರೂಪ ಕೊಟ್ಟ ಆಗಿತ್ತು ಎಂಬುದನ್ನು ತಿಳಿಸುತ್ತದೆ. |
| ೧೧. | ಬಿಳಿಚೋಡು | ಈಶ್ವರ ದೇವಾಲಯದ ಪೂರ್ವಕಡೆ ನೆಟ್ಟಕಲ್ಲು | ವಿಜಯನಗರ | ಕೃಷ್ಣದೇವರಾಯ | ಕ್ರಿ.ಶ. ೧೫ನೇ ಶತಮಾನ | ಬಿಳಿಚೋಡು ರಾಮದೇವರಿಗೆ ಬಿಳಿಚೋಡು ಹಮುದಾರ ಉತ್ತರ ಮಕ್ಕಳು ಒಂದು ಕೋಟೆ ಗ್ರಾಮವನ್ನು ದಾನ ನೀಡಿದ ವಿವರ ಇದೆ. |

| | | | | | | |
|---|---|---|---|---|---|---|
| ೧೨. | ಬಿಳಿಚೋಡು | ಈಶ್ವರ ದೇವಾಲಯದ ಮುಂದಿನ ಕಲ್ಲು | ವಿಜಯನಗರ | ಕೃಷ್ಣದೇವರಾಯ | ಕ್ರಿ.ಶ.೧೫೫೩ | ಕೃಷ್ಣನಾಯಕನ ಕಾರ್ಯಕರ್ತನಾದ ದಮ್ಮಪ್ಪ ನಾಯಕನು ಬಿಳಿಚೋಡು ಸೀಮೆಯಲ್ಲಿ ಕುರಿ ಮೇಲಿನ ತೆರಿಗೆ ವಜಾಗೊಳಿಸಿದ ವಿವರ ಇದೆ. |
| ೧೩. | ಬಿಳಿಚೋಡು | ಈಶ್ವರ ದೇವಾಲಯದ ಪಶ್ಚಿಮ ಕಂಬದಲ್ಲಿ | ವಿಜಯನಗರ | ಕೃಷ್ಣದೇವರಾಯ | ಕ್ರಿ.ಶ.೧೬ನೇ ಶತಮಾನ | ಬಿಳಿಚೋಡು ರಾಮದೇವರಿಗೆ ಬೇಲೂರು ರಾಮಪ್ಪ ನಾಯಕನು ಸ್ಥಾನಿಕ ಮಾದೇವಪ್ಪ... ದಾನ ಮಾಡಿದ ವಿವರ ಕೊನೆಯಲ್ಲಿ ಶಾಪಾಶಯವಿದೆ. |
| ೧೪. | ಕೊಡದಗುಡ್ಡ | ಕೊಡದಗುಡ್ಡದ ಕಗ್ಗಲಿ ಮರದ ಬುಡದಲ್ಲಿ | ವಿಜಯನಗರ | ನಾಗಪ್ಪ ನಾಯಕ | ಕ್ರಿ.ಶ.೧೬ನೇ | ಶಿಥಿಲಗೊಂಡಿದೆ ಕೊನೆಯಲ್ಲಿ ಶಾಪಾಶಯ ತಂದೆ ತಾಯಿಯನ್ನು ವಾರಣಾಸಿಯಲ್ಲಿ ಕೊಂದ ಪಾಪ ಹಾಗೂ ತನ್ನ ಹೆಂಡತಿಯನ್ನು ಹೊಲೆ ಮಾದಿಗಾರಿಗೆ ಕೊಟ್ಟು ಬಸರು ಹುಟ್ಟಿದಂತೆ ಎಂಬ ವಿವರ ಇದೆ. |

# ಶಿಲ್ಪಗಳ ಕೋಷ್ಟಕ

| ಕ್ರ.ಸಂ | ಗ್ರಾಮ | ದೇವಾಲಯಗಳು | ಶಿಲ್ಪಗಳು | ಶಾಸನಗಳು | ಕೋಟೆ | ಇತರೆ |
|---|---|---|---|---|---|---|
| ೦೧. | ಅಸಗೋಡು | ಶಂಬುಲಿಂಗೇಶ್ವರ, ಕಡ್ಲೆ ಬಸಪ್ಪ ದೇವಾಲಯ | ವಿರಗಲ್ಲುಗಳು-೪, ಮಹಾಸರಗಲ್ಲು-೧, ಶೈವದ್ವಾರಪಾಲಕ-೧, ವಿಷ್ಣು-೧, ವೀರಭದ್ರ-೧, ಗಣೇಶ-೧, ನಾಗ-೧ | ೪ | - | - |
| ೦೨. | ಬಿಳಿಚೋಡು | ಈಶ್ವರ, ಗಣೇಶ, ಆಂಜನೇಯ ಮೈಲಾರಲಿಂಗೇಶ್ವರ ದೇವಾಲಯಗಳು | ವೀರಗಲ್ಲುಗಳು-೫, ವಿಶ್ವಕ್ಸೇನ-೧, ಶಿವಲಿಂಗ-೧, ನಂದಿ-೧, ಲಕ್ಷ್ಮೀನಾರಾಯಣ-೧, ಸೂರ್ಯ-೧ ಇತರೆ-೪ | ೫ | - | - |
| ೦೩. | ಕಣಕುಪ್ಪೆ | - | ವಿರಗಲ್ಲುಗಳು-೨, ನಂದಿ-೨ | - | ೧ | - |
| ೦೪. | ಅಣಬೂರು | - | ಮಹಾಸತಿಗಲ್ಲು-೨, ಗಜಲಕ್ಷ್ಮೀ-೨ | ೧ | - | - |
| ೦೫. | ಚದುರುಗೋಳ | ಕಲ್ಲೇಶ್ವರ | ಬೈರವ-೧, ಅನಂತಶಯನ ವಿಷ್ಣು-೧ | ೧ | - | - |
| ೦೬. | ಕಲ್ಲೇದೇವರಪುರ | ಕಲ್ಲೇಶ್ವರ | ಕಾರ್ತಿಕೇಯ-೧ | ೨ | - | - |
| ೦೭. | ಮುಷ್ಠೂರು | | - | ೧ | - | ಮಠ-೧ |
| ೦೮. | ಕೋಣಚಗಲ್ | ರಂಗನಾಥಸ್ವಾಮಿ ದೇವಾಲಯ | - | - | - | ಹೊಂಡ |
| ೦೯. | ಗುತ್ತಿದುರ್ಗ | | ಬೈರವ-೧ | - | - | - |
| ೧೦. | ಸಿದ್ಧಯ್ಯನ ಕೋಟೆ | - | - | ೧ | ೧ | - |

## ಆಕರ ಗ್ರಂಥಗಳು


೦೧. ಅಣ್ಣಿಗೆರೆ ಎ.ಎಂ.(ಸಂ)., ೨೦೦೭, ಶಾಸನ ಸಂಗ್ರಹ, ಕನ್ನಡ ಸಾಹಿತ್ಯ ಪರಿಷತ್, ಬೆಂಗಳೂರು.

೦೨. ಕೃಷ್ಣರಾವ್ ಎಂ.ವಿ ಮತ್ತು ಕೇಶವಭಟ್ಟ, ೧೯೭೦, ಕರ್ನಾಟಕ ಇತಿಹಾಸ ದರ್ಶನ, ಕರ್ನಾಟಕ ಸಹಕಾರಿ ಪ್ರಕಾಶನ, ಬೆಂಗಳೂರು.

೦೩. ಗಂಡುಗಲಿ ಟಿ.ಎನ್., ೧೯೯೫, ನೋಡಬನ್ನಿ ಚಿತ್ರದುರ್ಗ, ಮದಕರಿ ಪ್ರಕಾಶನ, ಚಿತ್ರದುರ್ಗ.

೦೪. ಗಿರಿಜಾ ಟಿ., ೧೯೯೧, ಚಿತ್ರದುರ್ಗ ಜಿಲ್ಲಾದರ್ಶನಿ, ರೇಖಾ ಪ್ರಕಾಶನ, ದಾವಣಗೆರೆ.

೦೫. ಗಿರಿಜಾ ಟಿ., ೨೦೦೧, ದಾವಣಗೆರೆ ಇದು ನಮ್ಮ ಜಿಲ್ಲೆ, ನಿಹಾರಿಕಾ ಪ್ರಕಾಶನ, ದಾವಣಗೆರೆ.

೦೬. ಗುರುಸ್ವಾಮಿ ಕಲಿಕೇರಿ, ೨೦೧೦, ತಪೋಕ್ಷೇತ್ರ ಕಣ್ವಕುಪ್ಪೆ ಗವಿಮಠದ ಗುರು ಪರಂಪರಾ ಪ್ರಭೆ, ಶ್ರೀ ಮುಮ್ಮಡಿ ಶಾಂತಲಿಂಗೇಶ್ವರ ಪ್ರಕಾಶನ ಗವಿಮಠ, ಜಗಳೂರು.

೦೭. ಗೋಪಾಲ್ ಬಾ.ರಾ., ೧೯೯೬, ಇತಿಹಾಸ ಶಾಸನ ಮತ್ತು ಸಿದ್ಧಾಂತ, ಪ್ರಸಾರಾಂಗ, ಮಾನಸಗಂಗೋತ್ರಿ, ಮೈಸೂರು.

೦೮. ಗೋಪಾಲ್ ಬಾ.ರಾ. ೧೯೮೨, ಕರ್ನಾಟಕದಲ್ಲಿ ನವಶಿಲಾಯುಗ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.

೦೯. ಚಿದಾನಂದ ಮೂರ್ತಿ ಎಂ., ೧೯೭೯, ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೧೦. ತಿಪ್ಪೇರುದ್ರಸ್ವಾಮಿ ಹೆಚ್., ೧೯೯೭, ಕರ್ನಾಟಕ ಸಂಸ್ಕೃತಿ ಸಮೀಕ್ಷೆ, ಡಿ.ವಿ.ಕೆ. ಮೂರ್ತಿ ಪ್ರಕಾಶನ, ಮೈಸೂರು.

೧೧. ಪ್ರಭಾಕರ್ ನಾ., ೧೯೯೧, ಮದಕರಿಯ ನಾಡಿನಲ್ಲಿ, ಶಕ್ತಿ ಪ್ರಕಾಶನ, ಮೈಸೂರು.

೧೨. ಪಂಡಿತ ರುದ್ರಮುನಿ ಅಯ್ಯ ಎಸ್.ಎಂ., ೨೦೦೫, ಕೊಟ್ಟುರು ಶ್ರೀ ಗುರುಬಸವ ರಾಜೀಯಂ, ಪ್ರಣವ ಪ್ರತಿಷ್ಠಾನ ಕೋರಮಂಗಲ, ಬೆಂಗಳೂರು.

೧೩. ಪಂಡಿತ ರುದ್ರಮುನಿ ಅಯ್ಯ ಎಸ್.ಎಂ., ೨೦೦೨, ಕೊಟ್ಟದ ಶ್ರೀ ವೀರಭದ್ರಕಾವ್ಯ, ಪಲ್ಲವಿ ಪ್ರಕಾಶನ, ಕೊಟ್ಟೂರು.

೧೪. ಪರಮಶಿವಮೂರ್ತಿ ಡಿ.ವಿ., ೧೯೯೯, ಕನ್ನಡ ಶಾಸನ ಶಿಲ್ಪ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೧೫. ಫ್ಲೀಟ್ ಜೆ.ಎಫ್ ಮೂಲು ಸಿ.ಪಿ.ಕೆ., ೨೦೦೫, ಭಾರತೀಯ ಶಾಸನ ಶಾಸ್ತ್ರ ಪರಿಚಯ, ಲಕ್ಷ್ಮೀ ಪ್ರಿಂಟಿಂಗ್ ಪಬ್ಲಿಷಿಂಗ್ ಹೌಸ್, ಮೈಸೂರು.

೧೬. ಪುಟ್ಟಣ್ಣ ಎಂ.ಎಸ್., ೧೯೯೭, ಚಿತ್ರದುರ್ಗದ ಪಾಳೆಯಗಾರರು, ಕಾವ್ಯಾಲಯ ಪ್ರಕಾಶನ, ಮೈಸೂರು.

೧೭. ಬಣಕಾರ ರಾಜಶೇಖರ , ೧೯೯೯, ಬಾಗಳಿಯ ದೇಗುಲಗಳು, ದೇಗುಲ ಪ್ರಕಾಶನ, ಬಾಗಳಿ.

೧೮. ಮೂರ್ತಿ ಕೆ.ಎಲ್.ಎಂ, ೧೯೯೮, ಕರ್ನಾಟಕ ಕಲೆ ಮತ್ತು ವಾಸ್ತುಶಿಲ್ಪ, ರಂಜಿತ ಪ್ರಕಾಶನ, ತುಮಕೂರು.

೧೯. ರಾಜಶೇಖರಪ್ಪ ಬಿ., ೨೦೦೧, ಇತಿಹಾಸ ಕಥನ, ಸಿ.ವಿ.ಜಿ.ಪಬ್ಲಿಕೇಷನ್, ಬೆಂಗಳೂರು.

೨೦. ರಾಜಶೇಖರಪ್ಪ ಬಿ., ೨೦೦೭, ಚಿತ್ರದುರ್ಗದ ಪಾಳೆಯಗಾರರ ದಾಖಲೆಗಳು, ಕರ್ನಾಟಕ ರಾಜ್ಯ ಪತ್ರಗಾರ ಇಲಾಖೆ, ಬೆಂಗಳೂರು.

೨೧. ರಾಜಶೇಖರಪ್ಪ ಬಿ., ೨೦೦೧, ದುರ್ಗಶೋಧನ, ಕನ್ನಡ ಸಾಹಿತ್ಯ ಪರಿಷತ್, ಬೆಂಗಳೂರು.

೨೨. ಲಕ್ಷ್ಮಣ್ ತೆಲಗಾವಿ, ೧೯೯೭, ಇದು ಚಿತ್ರದುರ್ಗ, ಸ್ವಾತಿ ಪ್ರಕಾಶನ, ಬೆಂಗಳೂರು.

೨೩. ಲಕ್ಷ್ಮಣ್ ತೆಲಗಾವಿ, ೨೦೦೪, ಮೌರ್ಯ ಮತ್ತು ಶಾತವಾಹನ ಯುಗ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೨೪. ಲಕ್ಷ್ಮಣ್ ತೆಲಗಾವಿ (ಸಂ)., ೧೯೮೭, ಹರತಿ ಸಿರಿ, ವಾಲ್ಮೀಕಿ ಸಾಹಿತ್ಯ ಸಂಪದ; ಹರ್ತಿಕೋಟೆ.

೨೫. ಲಕ್ಷ್ಮಣ್ ತೆಲಗಾವಿ, ವೆಂಕಣ್ಣಚಾರ್ ಕೆ (ಸಂ)., ೧೯೭೯, ಐತಿಹಾಸಿಕ ಚಿತ್ರದುರ್ಗ, ಜಿಲ್ಲಾ ಇತಹಾಸ ಸಂಶೋಧನಾ ಮಂಡಳಿ, ಚಿತ್ರದುರ್ಗ.

೨೬. ಲಕ್ಷ್ಮಣ್ ತೆಲಗಾವಿ ಮತ್ತು ಶ್ರೀನಿವಾಸ ಎಂ.ವಿ., ೧೯೭೬, ಹುಲ್ಲೂರು ಶ್ರೀನಿವಾಸ ಜೋಯಿಸರ ಐತಿಹಾಸಿಕ ಲೇಖನಗಳು, ಹುಲ್ಲೂರು ಶ್ರೀನಿವಾಸ ಜೋಯಿಸರ ಗ್ರಂಥ ಪ್ರಕಟಣ ಸಮಿತಿ, ಚಿತ್ರದುರ್ಗ.

೨೭. ವಿರೂಪಾಕ್ಷಿ ಪೂಜಾರಹಳ್ಳಿ, ೨೦೦೨, ಚಿತ್ರದುರ್ಗ ಜಿಲ್ಲೆಯ ಬುಡಕಟ್ಟು ವೀರರು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೨೮. ವಿರೂಪಾಕ್ಷಿ ಪೂಜಾರಹಳ್ಳಿ, ೨೦೦೬, ಚಿನ್ನಹಗರಿ ಸಿರಿ, ಜನ್ನಹಗರಿ ಪ್ರಕಾಶನ, ಪೂಜಾರಹಳ್ಳಿ, ಬಳ್ಳಾರಿ ಜಿಲ್ಲೆ.

೨೯. ವಿರೂಪಾಕ್ಷಿ ಪೂಜಾರಹಳ್ಳಿ (ಸಂ)., ೨೦೦೬, ವಾಲ್ಮೀಕಿ ಸಿರಿ, ಚಿನ್ನಹಗರಿ ಪ್ರಕಾಶನ, ಪೂಜಾರಹಳ್ಳಿ, ಬಳ್ಳಾರಿ ಜಿಲ್ಲೆ.

೩೦. ವಿರೂಪಾಕ್ಷಿ ಪೂಜಾರಹಳ್ಳಿ, ೨೦೦೭, ಬೇಟೆ ಮತ್ತು ಬೇಡರು, ಚಿನ್ನಹಗರಿ ಪ್ರಕಾಶನ, ಪೂಜಾರಹಳ್ಳಿ, ಬಳ್ಳಾರಿ ಜಿಲ್ಲೆ.

೩೧. ವಿರೂಪಾಕ್ಷಿ ಪೂಜಾರಹಳ್ಳಿ, ೨೦೦೬, ಕಾಮಗೇತಿ ವಂಶಜರ ಚರಿತ್ರೆ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೩೨. ವೆಂಕಟೇಶಯ್ಯ ಎಂ.ಜಿ., ೧೯೭೧, ಚಿತ್ರದುರ್ಗದ ಪಾಳೆಯಗಾರರು, ಐ.ಬಿ.ಹೆಚ್ ಪ್ರಕಾಶನ, ಬೆಂಗಳೂರು.

೩೩. ವೆಂಕಟರತ್ನ ಎ.ಬಿ ಮತ್ತು ಪದ್ಮ ಎಂ.ಬಿ., ೧೯೯೧, ಇತಿಹಾಸ ಸಂಶೋಧನಾ ಮಾರ್ಗ, ಪ್ರಿಂಟಿಂಗ್ ಅಂಡ್ ಪಬ್ಲಿಷಿಂಗ್ ಕಂಪನಿ ಲಿಮಿಟೆಡ್, ಬೆಂಗಳೂರು.

೩೪. ಶಂಕರ ನಾರಾಯಣರಾವ್ ಎಂ.ಎಚ್., ೧೯೯೩, ಶ್ರೀಹರಿಹರೇಶ್ವರ ದೇವಾಲಯದ ಅಧ್ಯಯನ, ಶಾರದ ವಿಲಾಸ ಪ್ರಕಾಶನ, ಬೃಹಚ್ಛಲಾ ಮಠ, ಹೊನ್ನಾಳಿ.

೩೫. ಶೇಠೆ ಬಿ.ಎಸ್., ೧೯೯೦, ಕರ್ನಾಟಕದಲ್ಲಿ ಸತಿ ಪದ್ಧತಿ, ವೀರಶೈವ ಅಧ್ಯಯನ ಅಕಾಡೆಮಿ ಶ್ರೀ ನಾಗನೂರು ರುದ್ರಾಕ್ಷಿ ಮಠ, ಬೆಳಗಾವಿ.

೩೬. ಶ್ರೀನಿವಾಸ ಎಂ.ವಿ ಮತ್ತು ಲಕ್ಷ್ಮಣ್ ತೆಲಗಾವಿ (ಸಂ)., ೧೯೭೬, ಚಂದ್ರವಳ್ಳಿ, ಜಿಲ್ಲಾ ಇತಿಹಾಸ ಸಂಶೋಧನಾ ಮಂಡಳಿ, ಚಿತ್ರದುರ್ಗ.

೩೭. ಶ್ರೀನಿವಾಸ ರಿತ್ತಿ, ೧೯೮೭, ಅಶೋಕನ ಧರ್ಮಶಾಸನಗಳು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೩೮. ಶೇಷಶಾಸ್ತ್ರೀ ಆರ್., ೧೯೮೨, ಕರ್ನಾಟಕದ ವೀರಗಲ್ಲುಗಳು, ಕನ್ನಡ ಸಾಹಿತ್ಯ ಪರಿಷತ್, ಬೆಂಗಳೂರು.

೩೯. ಸದಾಶಿವಪ್ಪ ಕುಂಟಾ, ೧೯೯೩, ಹರಪನಹಳ್ಳಿಯ ಪಾಳೆಗಾರರು, ಮಾಲತೇಶ ಪ್ರಕಾಶನ, ಹರಪನಹಳ್ಳಿ.

೪೦. ಶಿವತಾರಕ್ ಕೆ.ಬಿ., ೨೦೦೧, ಕರ್ನಾಟಕದ ಪುರಾತತ್ವ ನೆಲೆಗಳು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೪೧. ಸುರೇಶ್ ಬಿ., ೨೦೦೯, ಚಿತ್ರದುರ್ಗ ದಾವಣಗೆರೆ ಜಿಲ್ಲೆಗಳ ದೇವಾಲಯಗಳು, ಸಂಶೋಧನಾ ಪ್ರಕಾಶನ, ಬಾಲೇನಹಳ್ಳಿ, ಚಳ್ಳಕೆರೆ.

೪೨. ಸುರೇಶ ಕೆ.ಎಂ, ವಾಸದೇವ ಬಡಿಗೇರ, ಮಾಡುಗೇರೆ ಕೊಟ್ರೇ, ಸೋಮಶೇಖರ ಎಸ್.ವೈ., ೧೯೯೯, ಕರ್ನಾಟಕ ದೇವಾಲಯಗಳ ಕೋಶ ಬಳ್ಳಾರಿ ಜಿಲ್ಲೆ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೪೩. ಸುಂದರ ಅ (ಸಂ)., ೧೯೯೭, ಕರ್ನಾಟಕ ಚರಿತ್ರೆ ಸಂಪುಟ-೧, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೪೪. ಸೋಮಶೇಖರ ಎಸ್.ವೈ., ೨೦೦೪, ಜಟಂಗರಾಮೇಶ್ವರ ದರ್ಶನ, ಸುಮೇದ ಪ್ರಕಾಶನ, ದೇವಸಮುದ್ರ.

೪೫. ಜ್ಞಾನಾನಂದ ಜಿ., ೨೦೦೨, ಶಿಲ್ಪಾದರ್ಶ ಸಂಪುಟ-೩, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

## ಲೇಖನಗಳು

೦೧. ಯಶೋಧ ರಾಜಶೇಖರಪ್ಪ, ೨೦೦೪, ಅಪರೂಪದ ವೀರಮಾಸ್ತಿ, ಇತಿಹಾಸ ದರ್ಶನ ಸಂಪುಟ-೭, ಕರ್ನಾಟಕ ಇತಿಹಾಸ ಅಕಾಡೆಮಿ, ಬೆಂಗಳೂರು.

೦೨. ಸುರೇಶ್ ಬಿ., ೨೦೦೪, ಅಣಬೂರು ಅಪರೂಪದ ಮಹಾಸತಿಗಲ್ಲು ಮತ್ತು ಅಪ್ರಕಟಿತ ಶಾಸನ, ಇತಿಹಾಸ ದರ್ಶರ್ನನ ಸಂಪುಟ-೨೩, ಕರ್ನಾಟಕ ಇತಿಹಾಸ ಅಕಾಡೆಮಿ, ಬೆಂಗಳೂರು.

೦೩. ಸೋಮಶೇಖರ ಎಸ್.ವೈ., ೧೯೯೭, ಆಕನೂರು ಗ್ರಾಮದ ಬಳಿ ಆದಿ ಇತಿಹಾಸ ಕಾಲದ ಕುರುಹುಗಳು, ಇತಿಹಾಸ ದರ್ಶನ ಸಂಪುಟ-೧೨, ಕರ್ನಾಟಕ ಇತಿಹಾಸ ಅಕಾಡೆಮಿ, ಬೆಂಗಳೂರು.

ಗ್ಯಾಸೆಟಿಯರ್‌ಗಳು, ಸಂಪುಟಗಳು.

೧. ಸತ್ಯನ್ ಬಿ.ಎನ್., ೧೯೬೭, ಚಿತ್ರದುರ್ಗ ಟಿಸ್ಟ್ರಿಕ್ಟ್ ಗೃಸೆಟಿಯರ್ ಗವರ್ನಮೆಂಟ್ ಆಫ್ ಕರ್ನಾಟಕ, ಬೆಂಗಳೂರು.

೨. ಸೂರ್ಯನಾಥ ಕಾಮತ್, ೧೯೮೪, ಕರ್ನಾಟಕ ರಾಜ್ಯ ಗ್ಯಾಸೆಟಿಯರ್ ಭಾಗ-೧, ಕರ್ನಾಟಕ ರಾಜ್ಯ ಸರಕಾರ, ಬೆಂಗಳೂರು.

೩. ತಂಬಂಡ ವಿಜಯ್ ಪೂಣಚ್ಚ (ಸಂ)., ೨೦೦೧, ಚರಿತ್ರ ವಿಶ್ವಕೋಶ ೪,ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೪. ಎಫಿಗ್ರಾಫಿಯಾ ಕರ್ನಾಟಿಕ ಸಂಪುಟ-೧೧,

೫. ಮೈಸೂರು ಆರ್ಕ್ಯಾಲಾಜಿಕಲ್ ರಿಪೋರ್ಟ್-೧೯೨೯

೬. ಮೈಸೂರು ಆರ್ಕ್ಯಾಲಾಜಿಕಲ್ ರಿಪೋರ್ಟ್-೧೯೪೨-೫೬

೭. ಕೆಲೆಸಾಲ್ ಜೆ., ೨೦೦೧, ಮದ್ರಾಸ್ ಡಿಸ್ಟ್ರಿಕ್ ಗೃಸಟಿಯರ್ ಬಳ್ಳಾರಿ ಸಂಪುಟ-೪, ಮದ್ರಾಸ್ ಗವರ್ನಮೆಂಟ್ ಪ್ರೆಸ್, ಮದ್ರಾಸ್.

೮. ಪ್ರಾನ್ಸಿಸ್ ಡಬ್ಲೂ., ೨೦೦೧, ಮದ್ರಾಸ್, ಗೃಸಟಿಯರ್ ಸಂಪುಟ-೩, ಕಾಸ್ಮೋ ಪಬ್ಲಿಕೇಷನ್, ಇಂಡಿಯಾ, ನ್ಯೂಡೆಲ್ಲಿ

**ಅಪ್ರಕಟಿತ ಪ್ರಬಂಧಗಳು**

೧. ತಿಪ್ಪೇಸ್ವಾಮಿ, ೨೦೦೬, ಚಿತ್ರದುರ್ಗ ರಕ್ಷಣಾ ವಾಸ್ತುಶಿಲ್ಪ, ಪಿಹೆಚ್.ಡಿ ಅಪ್ರಕಟಿತ ಮಹಾಪ್ರಬಂಧ, ಕನ್ನಡ ವಿಶ್ವವಿದ್ಯಾಲಯ, ಹಂಪಿ

೨. ತಿಪ್ಪೇಸ್ವಾಮಿ, ೨೦೦೫, ದಾವಣಗೆರೆ ಜಿಲ್ಲೆಯ ದೇವಾಲಯಗಳು, ಪಿಹೆಚ್.ಡಿ ಅಪ್ರಕಟಿತ ಮಹಾಪ್ರಬಂಧ, ಕನ್ನಡ ವಿಶ್ವವಿದ್ಯಾಲಯ, ಹಂಪಿ

೩. ವೆಂಕಟರಾಮಣ್ಣ, ೨೦೦೯, ವಿಜಯನಗರ ಕಾಲದ ಮುಳವಾಯು ರಾಜ್ಯ ಒಂದು ಅಧ್ಯಯನ, ಪಿಹೆಚ್.ಡಿ ಅಪ್ರಕಟಿತ ಮಹಾಪ್ರಬಂಧ, ಮೈಸೂರು ವಿಶ್ವವಿದ್ಯಾಲಯ, ಮೈಸರೂರು

೪. ಲೋಕೇಶ ಜಿ.ಎಂ., ೨೦೦೮, ಚಿನ್ನಹಗರಿ ನದಿ ಪರಿಸರ ಚಾರಿತ್ರಿಕ ಅಧ್ಯಯನ, ಅಪ್ರಕಟಿತ ಎಂ.ಫಿಲ್ ಪ್ರಬಂಧ, ಕನ್ನಡ ವಿಶ್ವವಿದ್ಯಾಲಯ, ಹಂಪಿ

**ಆಂಗ್ಲ ಪುಸ್ತಕಗಳು**

೧. ಆಚಾರ್ಯ ಪಿ.ಕೆ., ೧೯೩೪, ಆರ್ಕಿಸ್ಟೃಕ್ಚರ್ ಆಫ್ ಮಾಮಸಾರ, ಸಂಪುಟ೪, ಓರಿಯಂಟಲ್ ಬುಕ್ಸ್ ರಿಪ್ರಿಂಟ್ ಕಂಪ್ರೋರೇಷನ್, ನ್ಯೂಡೆಲ್ಲಿ

೨. ಆನಂದ ಕೆ. ಕೋಮಾರಸ್ವಾಮಿ, ೧೯೯೨, ಯಸ್‌ಯೇಸ್ ಇನ್ ಅರ್ಲಿ ಇಂಡಿಯನ್ ಆರ್ಕಿಸ್ಟೃಕ್ಚರ್, ಇಂದಿರಾಗಾಂಧಿ ನ್ಯಾಷನಲ್ ಆರ್ಕಿಸ್ಟೃಕ್ಚರ್ ಆರ್ಟ್, ನ್ಯೂಡೆಲ್ಲಿ

೩. ಪೆದ್ದಯ ಕೆ., ೧೯೯೫, ಎನ್ಶಿಯಂಟ್ ಆಂಧ್ರ ಹಿಸ್ಟರಿ ಅಂಡ್ ಆರ್ಕ್ಯಾಲಾಜಿ, ನ್ಯೂ ಲೈಟ್ ಅನ್ ಅರ್ಲಿಆಗ್ರೋ ಪೊಷ್ಟರಲ್ ಕಮ್ಯುನಿಟಿಸ್ ಆಫ್ ಸೌತ್ ಆಂಧ್ರ ಪ್ರದೇಶ, ಹಿಸ್ಟರಿ ಕಾಂಗ್ರೇಶ್, ನಂತಪುರ

೪. ರಾಮಚಂದ್ರರಾವ್ ಎಸ್.ಕೆ., ೧೯೯೨, ಆರ್ಟ್ ಅಂಡ್ ಆರ್ಕಿಸ್ಟೃಕ್ಚರ್ ಆಫ್ ಇಂಡಿಯನ್ ಟೆಂಪಲ್ಸ್ ಸಂಪುಟ ೩, ಬೆಂಗಳೂರು.

**ದಿನಪತ್ರಿಕೆಗಳು, ನಿಯತಕಾಲಿಕೆಗಳು**

೧. ಪ್ರಜಾವಾಣಿ

೨. ಜಗಳೂರು ವಾಯ್ಸ್

೩. ಜಿಲ್ಲಾ ಸಮಾಚಾರ ದಾವಣಗೆರೆ

೪. ವಾಲ್ಮೀಕಿ ಕರ್ನಾಟಕ

೫. ವಾಲ್ಮೀಕಿ ಸಂಪದ

೬. ಸಂಕ್ರಮಣ

೭. ಜನಪದ

ದಾವಣಗೆರ ಜಿಲ್ಲೆ



# ದಾವಣಗೆರ ಜಿಲ್ಲೆಯಲ್ಲಿ ಕಣಕುಪ್ಪೆ



# ಜಗಳೂರು ತಾಲ್ಲೂಕು ನಕ್ಷೆ





ಮಹಸತಿಗಲ್ಲು,ಅಣಬೂರು.



ವೀರಗಲ್ಲು,ಬಿಳಿಚೋಡು.



ಕಾಳಿ,ಬಿಳಿಚೋಡು.



ಶಾಸನೋಕ್ತ ವೀರಗಲ್ಲು, ಅಸಗೋಡು.



ವೀರಗಲ್ಲು, ಕೂಡದಗುಡ್ಡದ ದಾರಿಯಲ್ಲಿ.



ಈಶ್ವರ ದೇವಾಲಯ, ಬಿಳಿಚೋಡು.



ವೀರಭದ್ರ ದೇವಾಲಯದ ಕಂಬ,ಕೂಡದಗುಡ್ಡ.



ಈಶ್ವರ ದೇವಾಲಯದ ಕಂಬ, ಬಿಳಿಚೋಡು.



ಈಶ್ವರ ದೇವಾಲಯ, ಬಿಳಿಚೋಡು.



ವಿರಭದ್ರ ದೇವಾಲಯ, ಕೂಡದಗುಡ್ಡ.



ಕಣಕುಪ್ಪೆಯ ಕೋಟೆ, ಕಣಕುಪ್ಪೆ.



ಕಣಕುಪ್ಪೆ ಕೋಟೆಯ ಉತ್ತರ ನೋಟ.

